*प्रमेಹರಿಪುಜಂ - ಜಾವರಿಕೆಬೀಜ, ಬರ್ಬೂರವೀರದ್ರುಮೋದ್ಭೂತ - ಬೂರದ ಮೇಣ, ಪಲ್ಲವಮಾಮ್ರ - ಮಾವಿನ ಚಿಗುರು, [ನೀಪರುಜಂ - ನೀಪದ ತೊಕ್ಕು], ಕ್ಷೀರದ್ರು - ಆಲ, ಜಂಬೂ - ನೇರಳೆ, ತ್ವಚಃ - ಇವುಗಳ ಚಿಗುರು ಚಕ್ಕೆ. [ಬಾಲತಿಂದುಕ - ಎಳೆಯ ಹುಣಸೆಹಣ್ಣು, ಬಿಲ್ವ - ಬಿಲ್ವದ ಕಾಯಿ, ದಾಡಿಮಫಲ - ದಾಳಿಂಬೆ ಹಣ್ಣು, ಲೋದ್ರಾಲ - ಲೋಧ್ರಗಿಡ, ಯಕ್ಷದೃಗ್ - ಮತ್ತಿಮರದ ಹಾಲು, ದಧಿ - ಮೊಸರು, ಆಜ್ಯ - ತುಪ್ಪ, ಮಧು - ಜೇನು, ಲಾಜ - ಅರಳು, ತೈಲ - ಎಳ್ಳೆಣ್ಣೆ, ಮಥಿತ - ಮಜ್ಜಿಗೆ, ಏತಾನಿ - ಇವುಗಳು, ಅತಿಸಾರಿಣಮ್ - ಅತಿಸಾರ-ರೋಗಹರಗಳನ್ನು (ಹರಂತಿ - ನಾಶಮಾಡುತ್ತವೆ)].

ಗ್ರಹಣೀರೋಗಕ್ಕೆ -

**23.** ಪೂತಿಕದ್ವಯಬಾಣಪುಂಖಮಥಿತಂ ಕ್ಷುದ್ಬೋಧಿನೀಬರ್ಬರಾ
ಶಾರ್ಙ್ಗೇಷ್ಠಾತಲಪೋಟಪರ್ಪಟವಚಾಕ್ಷಾರತ್ರಯಂ ಜೀರಕಮ್ |
ವರ್ಷಾಭೂದ್ವಯಪಂಚಕೋಲಮರಿಚಾನ್ಯಂಕೋಲಕೈಡರ್ಯಕಾ
ಶಾರ್ಙ್ಗರೀದಳಹಿಂಗುಪಂಚಲವಣಂ ಘ್ನಂತಿ ಗ್ರಹಣ್ಯಾಮಯಾನ್ ||

ಪೂತಿಕಾದ್ವಯ - ತಾಪಸೀ ಹೊಂಗೆ, ಬಾಣಪುಂಖ - ಮುಳ್ಳುಕೊನ್ನೆ, ಮಥಿತ - ಮಜ್ಜಿಗೆ, ಕ್ಷುದ್ಬೋಧಿನೀ - ಚಿತ್ರಮೂಲ, ಬರ್ಬರಾ - ನಾರಂಬಾಳೆ, ಶಾರ್ಙ್ಗೇಷ್ಠಾ - ಕಿರುಗದಸೀಗೆ, ತಲಪೋಟ - ಆವರಿಕೆ, ಪರ್ಪಟ - ಪರ್ಪಾಟಕ, ವಚಾ - ಬಜೆ, ಕ್ಷಾರತ್ರಯಮ್ - ಖಾದ್ಯಕ್ಷೀರ, ಯವಕ್ಷಾರ, ಬಿಲುಗಾರ, ಜೀರಕಮ್ - ಜೀರಿಗೆ,

---

* ಈ ಶ್ಲೋಕದ ಅನುವಾದದಲ್ಲಿ ಆವರಣ (ಬ್ರಾಕೆಟ್)ದಲ್ಲಿರುವ ಭಾಗವು ಮೂಲ ಮಾತೃಕೆಯಲ್ಲಿ ಬಿಟ್ಟು ಹೋಗಿದ್ದು, ಸಂಪಾದಕರ ಸೇರ್ಪಡೆಯಾಗಿದೆ.

ವರ್ಷಾಭೂದ್ವ್ನಯ - ಕೊಮ್ಮೆ ಬಿಳಿಕೊಮ್ಮೆ, ಪಂಚಕೋಲ - ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ, ಮರೀಚ - ಮೆಣಸು, ಅಂಕೋಲ - ಅಂಕೋಲ, ಕೈಡರ್ಯಕಾ - ಕರಿಬೇವು, ಶಾರ್ಜರೀದಳ - ಪುಲ್ಲಂಪರಿಚೆಸೊಪ್ಪು, ಹಿಂಗು - ಹಿಂಗು, ಪಂಚಲವಣ - ಪಂಚಲವಣ (ಕಾಚಕ, ಸೈಂಧವ, ಸಾಮುದ್ರ, ವಿಡ, ಸೌವರ್ಚಲ) ಇವೆಲ್ಲವೂ, ಗ್ರಹಣ್ಯಾಮಯಾನ್ - ಗ್ರಹಣೀರೋಗವನ್ನು, ಘ್ನಂತಿ - ಪರಿಹರಿಸುತ್ತವೆ.

ಅಜೀರ್ಣರೋಗಕ್ಕೆ -

24. ಯಾನ್ಯತಿಸಾರಹರಾಣಿ ಪ್ರೋಕ್ತಾನಿ ಘ್ನಂತಿ ತಾನ್ಯಪಿ ಗ್ರಹಣೀಮ್ |
ಗ್ರಹಣೀಹರಾಣಿ ಯಾನಿ ಚ ತಾನಿ ಜ್ವಲಯಂತಿ ಜಠರವಹ್ನಿಮ್ ||

ಯಾನಿ - ಯಾವ ದ್ರವ್ಯಗಳು, ಅತಿಸಾರಾಣಿ - ಅತಿಸಾರಹರಗಳೆಂದು, ಪ್ರೋಕ್ತಾನಿ - ಹೇಳಿರುವುವೋ, ತಾನ್ಯಪಿ - ಅವುಗಳೂ, ಗ್ರಹಣೀಮ್ - ಗ್ರಹಣೀ ರೋಗವನ್ನು, ಘ್ನಂತಿ - ನಾಶಮಾಡುತ್ತವೆ. ಯಾನಿ - ಯಾವ ದ್ರವ್ಯಗಳು, ಗ್ರಹಣೀಹರಾಣಿ - ಗ್ರಹಣಿರೋಗಹರಗಳು, ತಾನಿ - ಅವುಗಳು, ಜಠರವಾಹ್ನಮ್ - ಜಠರಾಗ್ನಿಯನ್ನು, ಜ್ವಲಯಂತಿ - ವೃದ್ಧಿಮಾಡುವುವು.

ವಿಷೂಚಿರೋಗಕ್ಕೆ -

25. ಪೂರ್ವಂ ಛರ್ದನಮಂಭಸಾ ಸಪಟುನಾ ನಸ್ಯಂ ರಸೈರ್ಭೃಂಗಜೈಃ
ನಿಷ್ಪಾವಚ್ಛದವಿಶ್ವಸಿದ್ಧಮುದಕಂ ದಾಹಂ ತಥಾ ಪಾದಯೋಃ |
ಭೃಷ್ಟಸ್ಯಪಿಚುಟಂಕಣಸ್ಯ ಪಯಸಾ ಪಾನಂ ತಥಾ ಭೇಷಜಂ
ವರ್ಚೋಽಬಂಧನಮಂಜನಂ ಚ ಕಟುಕಂ ದ್ರವ್ಯೈರ್ದ್ವಿಷೂಚ್ಯಾಂ ಹಿತಮ್ ||

ಪೂರ್ವಂ - ಮೊದಲು, ಸಪಟುನಾ - ಉಪ್ಪುಸಹಿತವಾದ, ಅಂಭಸಾ - ನೀರಿನಿಂದ, ಛರ್ದನಂ - ವಾಂತಿ ಮಾಡಿಸುವುದು, ರಸೈರ್ಭೃಂಗಜೈಃ - ಗರುಗದ ಸೊಪ್ಪಿನ ರಸದಿಂದ, ನಸ್ಯಾ - ನಸ್ಯವನ್ನು ಮಾಡಿಸುವುದು, ನಿಷ್ಪಾವಚ್ಛದ - ಚಪ್ಪರದವರೆ ಸೊಪ್ಪು, ವಿಶ್ವಾ - ಶುಂಠಿ ಇದರ, ಸಿದ್ಧಮುದಕಮ್ - ಕಷಾಯವನ್ನು ಕುಡಿಸುವುದು, ತಥಾ - ಹಾಗೆಯೇ, ಪಾದಯೋಃ - ಹಿಮ್ಮಡಿಯಲ್ಲಿ, ದಾಹಮ್ - ರಕ್ಷೆ ಹಾಕಿಸುವುದು, ತತಃ - ಅನಂತರ, ಭೃಷ್ಟಸ್ಯಪಿಚುಟಂಕಣಸ್ಯ - ಬಿಲುಗಾರದ ಅರಳನ್ನು, ಪಯಃ ಪಾನಮ್ - ನೀರಲ್ಲಿ ಅರೆದು ಕುಡಿಸುವುದು, ವಚೋರ್ಬಂಧನಾ - ವಸ್ತಿ ಕಟ್ಟುವುದು, ಕಟುಕೈರ್ದ್ರವ್ಯೈಃ - ತೀಕ್ಷ್ಣವಾದ ದ್ರವ್ಯಗಳಿಂದ, ಅಂಜನಮ್ - ಅಂಜನವನ್ನು ಹಾಕಿಸುವುದು ಇವಿಷ್ಟೂ, ವಿಷೂಚ್ಯಾಂ - ವಿಷೂಚಿರೋಗದಲ್ಲಿ ಹಿತಮ್ - ಹಿತವನ್ನುಂಟು ಮಾಡುವ ಪದಾರ್ಥಗಳು.

ಮೂತ್ರರೋಗಕ್ಕೆ -

**26.** ಯಷ್ಟೀಗೋಕ್ಷುರಯುಗ್ಮಕಾಶಕತಕಾದ್ರಾಕ್ಷಾಗುಡೂಚೀವರೀ
ಕೂಷ್ಮಾಂಡೇಕ್ಷುಕಪೋತವಂಗಝುರಸೀದಾರ್ವೀತ್ರುಟೀಚಂದನಮ್ |
ಮತ್ಸ್ಯಾಕ್ಷೀಕಾಶತಂಡುಲೀಯವಸುಕಂ ಬ್ರಾಹ್ಮೀಕ್ಷುರೋರ್ವಾರುಕಂ
ಧಾತ್ರೀದುಗ್ಧಸಿತಾಬ್ದಕೇರಸಲಿಲಂ ಸ್ಯಾನ್ಮೂತ್ರಕೃಚ್ಛ್ರಾಪಹಮ್ ||

ಯಷ್ಟಿ - ಅತಿಮಧುರ, ಗೋಕ್ಷುರಯುಗ್ಮ - ನೆಗ್ಗಿಲು, ಆನೆನೆಗ್ಗಿಲು, ಕಾಶ - ಜಂಬುಹುಲ್ಲು, ಕತಕಾ - ಚಿಲ್ಲ, ದ್ರಾಕ್ಷಾ - ದ್ರಾಕ್ಷಿ, ಗುಡೂಚೀ - ಅಮೃತಬಳ್ಳಿ, ವರೀ - ಆಷಾಢಿ, ಕೂಷ್ಮಾಂಡ - ಬೂದಗುಂಬಳ, ಇಕ್ಷು - ಕಬ್ಬು, ಕಪೋತ - ಪಾರಿವಾಳ, ವಂಗ - ತಗರ, ಝುರಸಿ - ಚೇತರಾಸಿ, ದಾರ್ವೀ - ಮರದರಿಸಿನ,

ತ್ರುಟೀ - ಯಾಲಕ್ಕಿ, ಚಂದನಂ - ಶ್ರೀಗಂಧ, ಮತ್ಸ್ಯಾಕ್ಷೀ - ಹೊನಗೊನೆ, ಕಾಶ - ದರ್ಭೆ, ತಂಡುಲೀಯ - ಚೀಲಕೀರೆ, ವಸುಕಂ - ಎಕ್ಕ, ಬ್ರಾಹ್ಮೀ - ಗೋಣಿಸೊಪ್ಪು (ಹೊನಗೊನೆ), ಇಕ್ಷುರ - ಕೋಲಾವಲಿಕೆ, ಉರ್ವಾರುಕ - ಸೌತೆ, ಧಾತ್ರೀ - ನೆಲ್ಲಿ ಚೊಟ್ಟು, ದುಗ್ಧ - ಹಾಲು, ಸಿತಾ - ಸಕ್ಕರೆ, ಆಬ್ದಃ - ಕೊನ್ನಾರಿ, ಕೇರಸಲಿಲಂ - ಎಳನೀರು ಇವುಗಳು, ಮೂತ್ರಕೃಚ್ಛ್ರಾಪಹಮ್ - ಮೂತ್ರಕೃಚ್ಛ್ರರೋಗಹರ ದ್ರವ್ಯಗಳು.

ಅಶ್ಮರೀರೋಗಕ್ಕೆ -

27. ಮುಸ್ತಾಗುಚ್ಛಕುಳುತ್ಥಟಂಕಣಯವಕ್ಷಾರಾಶ್ಮಭಿದ್ವಾಲುಕಂ
ಪದ್ಮಾಯಷ್ಟಿಶಿಲಾಜಿತೂಶ್ಚ ತೃಣನಿರ್ಯಾಸಂಪ್ರಸಾರಿಣ್ಯಪಿ |
ಮೂಲಂ ಮೋರಟಶಿಗ್ರುಪೂಗವರಣೈರಂಡತ್ರಿವೃಜ್ಜೀರಕಂ
ಕೃಚ್ಛ್ರಘ್ನಾನಿ ಚ ಭೇಷಜಾನಿ ಸಹಸಾ ಘ್ನಂತ್ಯಶ್ಮರೀಶರ್ಕರಾಮ್ ||

ಮುಸ್ತಾ - ಭದ್ರಮುಸ್ತೆ, ಗುಚ್ಛ - ಕಾಡುಹೆಸರು, ಕುಳುತ್ಥ - ಹುರುಳಿ, ಟಂಕಣ - ಬಿಲಗಾರ, ಯವಕ್ಷಾರ - ಯವಕ್ಷಾರ, ಅಶ್ಮಭಿತ್ - ಪಾಷಾಣಬೋಧಿ, ವಾಲುಕ - ಪಚ್ಚಕರ್ಪೂರ, ಪದ್ಮ - ಬೆಟ್ಟದಾವರೆ, ಯಷ್ಟಿ - ಅತಿಮಧುರ, ಶಿಲಾಜಿತು - ಶಿಲಾಜಿತು, ತೃಣನಿರ್ಯಾಸ - ಗರಿಕೆನೊರೆ, ಪ್ರಸಾರಿಣೀ - ಮುಳ್ಳಗಸೆ, ಮೂಲಂ - ಮೂಲಂಗಿ, ಮೋರಟ - ಕುರಟಗೆ, ಶಿಗ್ರು - ನುಗ್ಗೆ, ಪೂಗ - ಅಡಿಕೆ, ವರಣಾ - ಮಟ್ಟಮಾಲಗೆ, ಏರಂಡ - ಔಡಲ (ಹರಳು), ತ್ರಿವೃತ್ - ತಿಗಡೆ, ಜೀರಕಂ - ಜೀರಿಗೆ, ಭೇಷಜಾನಿ - ಈ ಔಷಧ ಪದಾರ್ಥಗಳು, ಅಶ್ಮರೀಶರ್ಕರಾಂ - ಮೂತ್ರ

ರೋಗ ಮತ್ತು ಅಶ್ಮರಿರೋಗಗಳಿಂದಾಗುವ, ಕೃಚ್ಛ್ರಘ್ನಾನಿ - ತೊಂದರೆಗಳನ್ನು, ಸಹಸಾ - ಬೇಗನೆ, ಘ್ನಂತಿ - ಪರಿಹರಿಸುತ್ತವೆ.

ಪ್ರಮೇಹರೋಗಕ್ಕೆ -

**28.** ಆಕುಲ್ಯಾಂಬುದಿಕೋಷ್ಠರಾತ್ರಿಯುಗಳೀಕಾರ್ಪಾಸಬೀಜಾಮೃತಾ
ಪಾಠಾಬಿಂಬಜಕಂದಶಿಗ್ರುಕತಕಶ್ರೇಷ್ಠಾಂಶ್ಚ ಗುಂಜಾಸ್ಸಿತಾಃ |
ನಿರ್ಯಾಸಂ ಖದಿರಾರಿಮೇದಯುಗಳವೀರದ್ರುಮೋ ನಿಂಬಕಃ
ಬ್ರಹ್ಮಕ್ಷಾರಿಕಪಿತ್ಥಜಾಶ್ಚ ಕಕುಭಕ್ಷೀರದ್ರುಜಂಬೂತ್ವಚಃ ||

ಆಕುಲೀ - ಆವರಿಕೆಬೀಜ, ಅಂಬುದಿ - ಕೊನ್ನಾರಿ, ಕೋಷ್ಠ - ಕುಷ್ಠ, ರಾತ್ರಿಯುಗಳೀ - ಅರಿಸಿನ, ಮರದರಿಸಿನ, ಕಾರ್ಪಾಸಬೀಜ - ಹತ್ತಿಬೀಜ, ಅಮೃತಾ - ಅಮೃತಬಳ್ಳಿ, ಪಾಠಾ - ಅಗಳುಶುಂಠಿ, ಬಿಂಬಜಕಂದ - ತೊಂಡೆಗೆಡ್ಡೆ, ಶಿಗ್ರು - ನುಗ್ಗೆ, ಕತಕ - ಚಿಲ್ಲ, ಶ್ರೇಷ್ಠಾ - ಅಳಲೇಕಾಯಿ, ಗುಂಜ - ಗುಲಗಂಜಿ, ಸಿತಾ - ಸಕ್ಕರೆ, ನಿರ್ಯಾಸ - ಕಷಾಯರಸ, ಖದಿರ - ಕಾಚು, ಅರಿಮೇದಯುಗಳಂ - ಬಿಳಿಕಗ್ಗಲಿ, ಕರಿಕಗ್ಗಲಿ, ವೀರದ್ರುಮ - ಗೇರುಚಕ್ಕೆ, ನಿಂಬಕ - ಬೇವು, ಬ್ರಹ್ಮಾಕ್ಷರಿ - ಬ್ರಾಹ್ಮಿ ಸಿದ್ಧಕ್ಷೀರ, ಕಪಿತ್ಥಜಾ - ಬೇಲದಹಣ್ಣು, ಕಕುಭ - ಕೆಂಪುಮತ್ತಿ, ಕ್ಷೀರದ್ರು - ಆಲ, ಜಂಬೂತ್ವಚ - ನೇರಳೇ ಚಕ್ಕೆ,

**29.** ಕಾಂತಾಹ್ವಭ್ರಕಕಿಟ್ಟಗುಗ್ಗುಲುಶಿಲಾಜತ್ವಂಬುಮತ್ಸ್ಯೇಕ್ಷಣಾ
ಭಾರ್ಜೀಪರ್ಪಟಕೈರವೇಕ್ಷುರಭವಂ ಬೀಜಂ ಚ ಕೈಡರ್ಯಕಮ್ |
ಪುಷ್ಪಾಶ್ವತ್ಥಕಕೇರಪುಷ್ಪಮುಸಲೀವೇಣುಚ್ಛದಾಃ ಕಿಂಶುಕಾಃ
ತೈಲಂ ಮಾಕ್ಷಿಕಮುದ್ಗಯೂಷಮಥಿತಂ ಘ್ನಂತಿ ಪ್ರಮೇಹಂ ಧ್ರುವಮ್ ||

ಕಾಂತಾ - ಕಾಂತಭಸ್ಮ, ಅಭ್ರಕಕಿಟ್ಟ - ಅಭ್ರಕಕಿಟ್ಟ, ಗುಗ್ಗುಲು - ಗುಗ್ಗುಳ, ಶಿಲಾಜಿತು - ಶಿಲಾಜಿತು, ಅಂಬು - ಕೊನ್ನಾರಿ, ಮತ್ಸ್ಯೇಕ್ಷಣಾ - ಹೊನಗೊನೆ, ಭಾರ್ಜೀ - ಗಂಟುಭಾರಂಗಿ, ಪರ್ಪಟ - ಪರ್ಪಾಟಕ, ಕೈರವ - ಬಿಳಿನೈದಿಲು, ಇಕ್ಷುರಭವಬೀಜ - ಕೋಲಾವಲಿಕೆಬೀಜ, ಚ - ಮತ್ತು, ಕೈಡರ್ಯಕಂ - ಕರಿಬೇವು, ಪುಷ್ಪಾಶ್ವತ್ಥಕ - ಅಶ್ವತ್ಥಹೂವು, ಕೇರಪುಷ್ಪ - ತೆಂಗಿನ ಹೊಂಬಾಳೆ, ಮುಸಲೀ - ನೆಲದಾಳೆ, ವೇಣುಚ್ಛದ - ಬಿದಿರುಸಿಪ್ಪೆ, ಕಿಂಶುಕ - ಮುಳ್ಳುಮುತ್ತುಗ, ತೈಲಂ - ಎಳ್ಳೆಣ್ಣೆ, ಮಾಕ್ಷಿಕ - ಜೇನು, ಮುದ್ಗಯೂಷ - ಹೆಸರುಕಟ್ಟು, ಮಥಿತಂ - ಮಜ್ಜಿಗೆ ಇವುಗಳು, ಧ್ರುವಮ್ - ನಿಶ್ಚಯವಾಗಿಯೂ, ಪ್ರಮೇಹಂ - ಪ್ರಮೇಹರೋಗವನ್ನು, ಘ್ನಂತಿ - ನಾಶಮಾಡುತ್ತವೆ.

ಪಿಟಕಕ್ಕೆ -

30. ಏಲಾತುರುಷ್ಕಗದಪತ್ರಿಕರಾತ್ರಿಸೇವ್ಯ
ಕ್ಷೋಣೇಯಶುಕ್ತಿನಸ್ಯಗುಗ್ಗುಲುದೇವಧೂಪಾಃ |
ಶ್ರೀವಾಸಬೋಳತಗರಾಗರುದೇವದಾರು
ಕ್ಷೀರದ್ರುಮಾಶ್ಚ ನಿಯತಂ ಪಿಟಕಾನ್ ನಿಹನ್ಯುಃ ||

ಏಲಾ - ಏಲಕ್ಕಿ, ತುರುಷ್ಕ - ತುರುಕಬೇವಿನಸೊಪ್ಪು, ಗದಾಪತ್ರಿಕ - ಚಂಗಲಕೋಷ್ಠದ ಎಲೆ, ರಾತ್ರಿ - ಅರಿಸಿನ, ಸೇವ್ಯ - ಮುಡಿವಾಳ, ಕ್ಷೋಣೇಯಶುಕ್ತಿ - ಕವಡೆ, ನಸ್ಯ - ನಸ್ಯ, ಗುಗ್ಗುಲು - ಗುಗ್ಗುಳ, ದೇವಧೂಪ - ಸಾಂಬ್ರಾಣಿ, ಶ್ರೀವಾಸ - ಸರಳವೃಕ್ಷದ ರಸ, ಬೋಳ - ಬಾಣಂತಿಬೋಳ, ತಗರ - ಗಂದಿಗೆತಗರ (ನಂದಿಬಟ್ಟಲು), ಅಗರು - ಅಗಿಲು, ದೇವದಾರು - ದೇವದಾರು, ಚ - ಮತ್ತು,

ಕ್ಷೀರದ್ರುಮಾ - ಆಲ ಇವುಗಳು, ನಿಯತಂ - ನಿಶ್ಚಯವಾಗಿಯೂ, ಪಿಟಕಾನ್ - ಪಿಟಕ ರೋಗಗಳನ್ನು (ಸಣ್ಣ ಕುರು ಅಥವಾ ಗುಳ್ಳೆಗಳನ್ನು), ನಿಹನ್ಯುಃ - ನಾಶಪಡಿಸುತ್ತವೆ.

ಸೋಮರೋಗಕ್ಕೆ -

31. ನಿಘ್ನಂತಿ ಮಾಷಮುಸಲೀಹಿಮತಾಳಕಂದ
ಧಾತ್ರೀವರೀಕತಕಗೋಕ್ಷುರಶರ್ಕರೈಲಾಃ |
ದ್ರಾಕ್ಷಾಗುಡೂಚಿಕದಲೀಫಲಕಂದಪದ್ಮ-
ಕಿಂಜಲ್ಕಸೇವ್ಯಮಧುಕಾನಿ ಚ ಸೋಮರೋಗಮ್ ||

ಮಾಷ - ಉದ್ದು, ಮುಸಲೀ - ನೆಲದಾಳೆ, ಹಿಮ - ಪಚ್ಚಕರ್ಪೂರ, ತಾಳಕಂದ - ತಾಳೆಗೆಡ್ಡೆ, ಧಾತ್ರೀ - ನೆಲ್ಲಿಚಟ್ಟು, ವರೀ - ಆಷಾಢಿ, ಕತಕ - ಚಿಲ್ಲ, ಗೋಕ್ಷುರ - ನೆಗ್ಗಿಲು, ಶರ್ಕರ - ಸಕ್ಕರೆ, ಏಲಾ - ಏಲಕ್ಕಿ, ದ್ರಾಕ್ಷಾ - ದ್ರಾಕ್ಷಿ, ಗುಡೂಚಿ - ಅಮೃತಬಳ್ಳಿ, ಕದಲೀಫಲ - ಬಾಳೆಹಣ್ಣು, ಕಂದಪದ್ಮ - ತಾವರೆಗೆಡ್ಡೆ, ಕಿಂಜಲ್ಕ - ತಾವರೆಕುಸುಮ, ಸೇವ್ಯ - ಮುಡಿವಾಳ, ಮಧುಕ - ಯಷ್ಟಿಮಧುಕ ಇವುಗಳು, ಸೋಮರೋಗಂ - ಸೋಮರೋಗವನ್ನು, ನಿಘ್ನಂತಿ - ನಾಶಪಡಿಸುತ್ತವೆ.

ಕುರುವಿಗೆ -

32. ತ್ರಾಯಂತೀತ್ರಿಫಲಾಕರಂಜಯುಗಳಂ ಶಿಗ್ರುದ್ವಯೀ ಮೋರಟಾ
ವರ್ಷಾಭೂವರುಣಾಜಶೃಂಗಿಬೃಹತೀದ್ವಂದ್ವಾಶ್ಚಗಂಧಾಶಿಫಾಃ |
ಸೇವ್ಯದ್ವಂದ್ವಪಟೋಲಗುಗ್ಗುಲುಶಿಲಾಜಿತ್ವಗ್ನಿನಿಂಬದ್ರುಮಾ
ಬಾಹ್ಯಾಭ್ಯಂತರವಿದ್ರುಧಿಪ್ರಶಮಯಂತ್ಯಹ್ನಾಯ ಲೇಪಾದಿಭಿಃ ||

ತ್ರಾಯಂತೀ - ನೀರಾಮೆ ಬಳ್ಳಿ, ತ್ರಿಫಲಾ - ತ್ರಿಫಲೆ, ಕರಂಜಯುಗಲೀ - ಬಿಳಿಹೊಂಗೆ, ಕರಿಹೊಂಗೆ, ಶಿಗ್ರುದ್ವಯ - ಕರಿನುಗ್ಗೆ, ಬಿಳಿನುಗ್ಗೆ, ಮೋರಟ - ಸೇಗುಡಿಕೆ (ಕಬ್ಬಿನ ಬೇರು), ವರ್ಷಾಭೂ - ಬಿಳಿಕೊಮ್ಮೆ, ವರುಣಾ - ಹೊಳೇಲಕ್ಕಿ, ಅಜಶೃಂಗೀ - ಆಡಿನಕೊಂಬು (ಔಷಧಿಗಿಡ), ಬೃಹತಿದ್ವಯ - ಹೆಗ್ಗುಳ್ಳ, ಕಿರುಗುಳ್ಳ, ಅಶ್ವಗಂಧಾಶಿಫಾ - ಅಶ್ವಗಂಧಿಬೇರು, ಸೇವ್ಯದ್ವಂದ್ವ - ಲಾವಂಚ, ಮುಡಿವಾಳ, ಪಟೋಲ - ಕಹಿಪಡವಲ, ಗುಗ್ಗುಲು - ಗುಗ್ಗುಳ, ಶಿಲಾಜಿತು - ಶಿಲಾಜಿತು, ಅಗ್ನಿ - ಚಿತ್ರಮೂಲ, ನಿಂಬದ್ರುಮ - ಬೇವಿನಚಕ್ಕೆ ಇವುಗಳನ್ನು, ಬಾಹ್ಯಾಭ್ಯಂತರ - ಕುರುವಿನ ಮೇಲೆ ಮತ್ತು ಮಧ್ಯದಲ್ಲಿ (ಸುತ್ತಲೂ), ಲೇಪಾದಿಭಿಃ - ಲೇಪಿಸುವುದರಿಂದ, ವಿದ್ರುಧಿ - ಕುರುವಿನ, ದಹನ - ಉರಿಯುವಿಕೆಯನ್ನು, ಪ್ರಶಮಯಂತಿ - ಶಾಂತಗೊಳಿಸುತ್ತವೆ.

ಸ್ತನದಲ್ಲಾದ ಕುರುವಿಗೆ -

33. ಸ್ತನವಿದ್ರಧೌ ತು ತಿಲಯಷ್ಟಿಕನ್ಯಕಾ
ಕುರವಕತ್ವಗಂಬುಪಿಚುಮಂದರಾತ್ರಿಭಿಃ |
ಬಹುಪಾದಚಲದಳಸದಾಫಲತ್ವಚಃ
ಘೃತಶಾರಿಬಾಕುಳಿದಲೈಶ್ಚ ವಿಲೇಪನೈಃ ||

ಸ್ತನವಿದ್ರಧೌ ತು - ಸ್ತನವಿದ್ರಧಿರೋಗವಾದರೋ, ತಿಲ - ಎಳ್ಳು, ಯಷ್ಟಿ - ಅತಿಮಧುರ, ಕನ್ಯಕಾ - ಕರ್ತಾಳೆ (ಕುಮಾರಿ), ಕುರುವಕ - ಹಳದಿ ಗೋರಂಟಿ, ತ್ವಕ್ - ಲವಂಗಚಕ್ಕೆ, ಅಂಬುದ - ಕೊನ್ನಾರಿ, ಪಿಚುಮಂದ - ಬೇವು, ರಾತ್ರಿಭಿಃ - ಅರಿಸಿನಗಳನ್ನೂ, ಬಹುಪಾದಚಲಚ್ಛದ - ಆಲದ ಎಲೆ, ಸದಾಫಲತ್ವಚಃ -

ಅರ್ತಿಚಕ್ಕೆ, ಘೃತ - ತುಪ್ಪ, ಶಾರಿಬಾ - ಸೊಗದೆ, ಆಕುಳೀದಲ್ಯೆ - ಜಾವರಿಕೆ ಸೊಪ್ಪುಗಳ, ವಿಲೇಪನ್ಯೆಃ - ಲೇಪನದಿಂದ ಶಮನಗೊಳ್ಳುತ್ತದೆ.

ವೃದ್ಧಿರೋಗಕ್ಕೆ -

**34.** ಹಿಂಗುಪಟುಲಶುನಪರ್ಪಣಲವಣಯಕ್ಷಾಕ್ಷ್ಯೈರಂಡತೈಲಮುಂಡಿನ್ಯಃಈ |
ಮೋರಟಶಿಗ್ರುಚಕ್ರಲತೋಗ್ರವರ್ಷಾಭೂಚಿತ್ರಕಾಶ್ಚ ವೃದ್ಧಿಘ್ನಾಃ ||

ಹಿಂಗು - ಇಂಗು, ಪಟು - ಸ್ಯೆಂಧವಲವಣ, ಲಶುನ - ಬೆಳ್ಳುಳ್ಳಿ, ಪರ್ಪಟ - ಪರ್ಪಾಟಕ (ಕಲ್ಲುಸಬಸಿಗೆ), ಲವಣ - ಉಪ್ಪು, ಯಕ್ಷಾಕ್ಷಿ - ಗೆಜ್ಜುಗ, ಏರಂಡತೈಲ - ಊಡಲದ ಎಣ್ಣೆ (ಹರಳೆಣ್ಣೆ), ಮುಂಡಿನೀ - ಬೋಳಾ, ಮೋರಟ - ಸೇಗುಡಿಕೆ (ಮಜ್ಜಿಗೆ, ಇಕ್ಷುಮಾಲಾ), ಶಿಗ್ರು - ನುಗ್ಗೆ, ಚಕ್ರಲತಾ - ನರವಲು, ಉಗ್ರ - ಬಜೆ, ವರ್ಷಾಭೂ - ಬಿಳಿಕೊಮ್ಮೆ, ಚಿತ್ರಕ - ಚಿತ್ರಮೂಲ ಇವುಗಳು, ವೃದ್ಧರೋಗಘ್ನಾಃ - ವೃದ್ಧಿರೋಗಹರಗಳು.

ಗುಲ್ಮರೋಗಕ್ಕೆ -

**35.** ನಿರ್ಗುಂಡೀದಶಮೂಲಬರ್ಬರಸುಧಾಕ್ಷೀರೀಹರಿನ್ಮಂಜರೀ
ತ್ರಿಕ್ಷಾರಂ ದ್ವಿಕರಂಜಪಂಚಲವಣಕ್ಷುದ್ರಾಗ್ನ್ಯಜಾಜೀದ್ವಯಮ್ |
ಶ್ರೇಷ್ಠಾಹಿಂಗುಕುಳುತ್ಥಯೂಷವಪುಷಾಕೇರೀಪಯಶ್ಛಿದ್ವಿಪಾ
ಕೈಡರ್ಯವ್ಯೋಷ ಗೇಹಧೂಮಲಶುನಾಸ್ಯಾಮ್ಲಸ್ತಥಾ ವೇತಸಮ್ ||

ನಿರ್ಗುಂಡೀ - ಲಕ್ಕಿ, ದಶಮೂಲ - ದಶಮೂಲ, ಬರ್ಬರ - ಗಂಟುಭಾರಂಗಿ, ಸುಧಾ - ಮುಂಡಗಳ್ಳಿ, ಕ್ಷೀರೀ - ಹಾಲುತೊಟ್ಟಿನ ಗಿಡ, ಹರಿನ್ಮಂಜರೀ - ತುಪ್ಪಕೀರೆ

(ಕುಪ್ಪಿಗಿಡ), ತ್ರಿಕ್ಷಾರ - ಸರ್ಜಕ್ಷಾರ, ಯವಕ್ಷಾರ, ಟಂಕಣಕ್ಷಾರ, ದ್ವಿಕರಂಜ - ಹೊಂಗೆ, ಬಿಳಿಹೊಂಗೆ, ಪಂಚಲವಣ - ಐದು ವಿಧದ ಉಪ್ಪು (ಕಾಚಕ, ಸೈಂಧವ, ಸಾಮುದ್ರ, ವಿಡ ಮತ್ತು ಸೌವರ್ಚಲ), ಕ್ಷುದ್ರಾ - ಹೆಗ್ಗುಳ್ಳ, ಅಗ್ನಿ - ಚಿತ್ರಮೂಲ, ಅಜಾಜೀದ್ವಯ - ಜೀರಿಗೆ, ಕರಿಜೀರಿಗೆ, ಶ್ರೇಷ್ಠಾ - ನೆಲದಾವರೆ, ಹಿಂಗು - ಹಿಂಗು, ಕುಳುತ್ಥ - ಹುರಳಿ, ಯೂಷವಪುಷ - ಮಾಂಸದ ಸಾರು, ಕೇರೀಪಯ - ಎಳನೀರು, ದ್ವಿಪಾ - ಏಲಕ್ಕಿ, ಕೈಡರ್ಯ - ಶಿವನಿ, ವ್ಯೋಷ - ತ್ರಿಕಟುಕ, ಗೇಹಧೂಮ - ಇಲ್ಲಣ, ಲಶುನ - ಬೆಳ್ಳುಳ್ಳಿ, ಅಮ್ಲ - ಹುಣಿಸೆ, ವೇತಸ - ನೀರಂಜಿ (ಹಬ್ಬೆಗಿಡ),

36. ವೃಶ್ಚೀಕದ್ವಯಪಂಚಕೋಲಲವಣಾದೇವದ್ರುಮಃ ಕಿಂಶುಕಂ
ನಾರಂಗೋತ್ಫಲಮೂಷರಸ್ಯ ಸಲಿಲಂ ಹಿಂಗ್ವಾಮ್ಲಕಂ ಮೂಲಕಮ್ |
ಚಿಂಚಾತ್ವಕ್ಸ್ನುಹಿತಾಳಪುಷ್ಪಭಸಿತಂ ತೈಲಂ ತಥೈರಂಡಜಂ
ಗುಲ್ಮಪ್ಲೀಹಯಕೃತ್ತನಿಂಪ್ರತಿಕೃನ್ನಿಹನ್ಯಾತ್ತಥಾಷ್ಠೀಲಕಮ್ ||

ವೃಶ್ಚೀಕದ್ವಯ - ಕೊಮ್ಮೆ, ಬಿಳಿಕೊಮ್ಮೆ, ಪಂಚಕೋಲ - ಹಿಪ್ಪಲಿ, ಚವ್ಯ, ಚಿತ್ರಮೂಲ, ಮೋಡಿ ಮತ್ತು ಶುಂಠಿ, ಲವಣ - ಸೈಂಧವಲವಣ, ದೇವದ್ರುಮ - ದೇವದಾರು, ಕಿಂಶುಕ - ಮುತ್ತುಗ, ನಾರಂಗೋತ್ಫಲ - ಕಿತ್ತಲೆಹಣ್ಣು, ಊಷರ - ಚೌಳುಮಣ್ಣು, ಸಲಿಲ - ನೀರು, ಹಿಂಗು - ಹಿಂಗು, ಆಮ್ಲಕ - ಹುಣಿಸೆ, ಮೂಲಕ - ಮೂಲಂಗಿ, ಚಿಂಚಾತ್ವಕ್ - ಹುಣಿಸೆತೊಕ್ಕು, ಸ್ನುಹಿ - ಮುಂಡಗಳ್ಳಿ, ತಾಳಪುಷ್ಪ - ನೈದಿಲೆಹೂವು, ಭಸಿತ - ವಿಭೂತಿ, ತೈಲ - ಎಳ್ಳೆಣ್ಣೆ, ಏರಂಡಜ - ಔಡಲಹರಳು ಇವುಗಳು, ಗುಲ್ಮ - ಗುಲ್ಮ, ಪ್ಲೀಹ - ಪ್ಲೀಹ, ಯಕೃತ್ - ಯಕೃತ್, ತಥಾ - ಹಾಗೆಯೇ, ಅಷ್ಠೀಲಕಮ್ - ಅಷ್ಠೀಲರೋಗಗಳನ್ನು, ನಿಹನ್ಯಾತ್ - ನಾಶ ಮಾಡುತ್ತವೆ.

ರಕ್ತಗುಲ್ಮರೋಗಕ್ಕೆ -

37. ದ್ವಿಕರಂಜದ್ವಿಪುನರ್ನವಹಿಂಗುಕುಳುತ್ಥಶ್ಯಾನಲಕ್ವಥಾಃ |
ಕಿಂಶುಕಪಲಾಶಭಸಿತಂ ಕ್ಷಾರೋಲಶುನಶ್ಚ ರಕ್ತಗುಲ್ಮಘ್ನಾಃ ||

ದ್ವಿಕರಂಜ - ಹೊಂಗೆ, ಬಿಳಿಹೊಂಗೆ, ದ್ವಿಪುನರ್ನವಾ - ಕೊಮ್ಮೆ, ಬಿಳಿಕೊಮ್ಮೆ, ಹಿಂಗು - ಹಿಂಗು, ಕುಳುತ್ಥ - ಹುರಳಿಕಟ್ಟು, ಅನಲಕ್ವಥ - ಬೇಯಿಸಿದ ಚಿತ್ರಮೂಲ, ಕಿಂಶುಕ - ಮುತ್ತುಗ, ಪಲಾಶಭಸಿತ - ಕಚೋರಭಸ್ಮ, ಕ್ಷಾರ - ಲವಣ, ಲಶುನ - ಬೆಳ್ಳುಳ್ಳಿ ಇವುಗಳು, ರಕ್ತಗುಲ್ಮಘ್ನಾಃ - ರಕ್ತಗುಲ್ಮರೋಗಹರದ್ರವ್ಯಗಳು.

ಶೂಲರೋಗಕ್ಕೆ -

38. ವರ್ಷಾಭೂದ್ವಯಚವ್ಯಚಿತ್ರಕಕಣಾ ತನ್ಮೂಲಶುಂಠೀಶಿವಾ
ನಿರ್ಗುಂಡೀಘನದಾಕ್ಷಿಕಿಂಶುಕವಚಾತೈಲಂ ಚ ಚಿತ್ರೋದ್ಭವಮ್ |
ಕ್ಷಾರಾಹಿಂಗುಕುಳುತ್ಥಪಂಚಲವಣಂ ತೀಕ್ಷ್ಣಂ ರಸೋನಸ್ತಥಾ
ಶೂಲಘ್ನಂ ಚ ಸಮೀರಗುಲ್ಮಶಮನಂ ಯಚ್ಚೋಕ್ತಮಪ್ಯೌಷಧಮ್ ||

ವರ್ಷಾಭೂದ್ವಯ - ಕೊಮ್ಮೆ, ಬಿಳಿಕೊಮ್ಮೆ, ಚವ್ಯ - ಚವ್ಯ, ಚಿತ್ರಕ - ಚಿತ್ರಮೂಲ, ಕಣಾಮೂಲ - ಹಿಪ್ಪಲಿಮೂಲ, ಶುಂಠೀ - ಶುಂಠಿ, ಶಿವಾ - ಅರಿಸಿನ, ನಿರ್ಗುಂಡೀ - ಲಕ್ಕಿ, ಘನದಾಕ್ಷಿ - ಕೊನ್ನಾರಿ, ಕಿಂಶುಕ - ಮುತ್ತುಗ, ವಚಾ - ಬಜೆ, ತೈಲ - ಎಳ್ಳೆಣ್ಣೆ, ಚ - ಮತ್ತು, ಚಿತ್ರೋದ್ಭವ - ಚಿತ್ರಮೂಲದ ಬೇರು, ಕ್ಷಾರ - ಉಪ್ಪು, ಹಿಂಗು - ಹಿಂಗು, ಕುಳುತ್ಥ - ಹುರುಳಿ, ಪಂಚಲವಣ - ಪಂಚಲವಣ, ತೀಕ್ಷ್ಣ - ಯವಕ್ಷಾರ, ರಸೋನ - ಬೆಳ್ಳುಳ್ಳಿ ಇವುಗಳು, ತಥಾ - ಹಾಗೆಯೇ, ಯಚ್ಚೋಕ್ತಮಪ್ಯೌಷಧಮ್ - ಹಿಂದೆ ಹೇಳಿದ ಔಷಧಿಗಳು, ಶೂಲಘ್ನ -

ಶೂಲರೋಗ, ಚ - ಮತ್ತು, ಸಮೀರಗುಲ್ಮ - ವಾತಗುಲ್ಮರೋಗಗಳನ್ನು, ಶಮನಮ್ - ಶಮನಗೊಳಿಸುತ್ತದೆ.

ಮಹೋದರರೋಗಕ್ಕೆ -

**39.** ದಂತೀಶಂಖಿನೀಹಿಂಗುಬಿಲ್ವಲಶುನಂ ಕ್ಷಾರಂ ಪಲಾಶೋದ್ಭವಂ
ಶ್ರೇಷ್ಠಾವಾರಿಧಿಶುಕ್ತಿಪಂಚಲವಣಾನ್ಯೆರಂಡತೈಲಂ ಸ್ನುಹೀ |
ದ್ವಿಕ್ಷಾರೋಗಿರಿಕರ್ಣಿಚಿತ್ರಕಕಣಾತನ್ಮೂಲಶುಂಠೀತ್ರಿವೃ-
ದ್ಗೋಮೂತ್ರಾಣಿ ಚ ನಾಶಯಂತಿ ಸಹಸಾ ಸರ್ವೋದರಾಣಿ ಧ್ರುವಮ್ ||

ದಂತೀ - ಜಾಪಾಳ, ಶಂಖಿನೀ - ಬಾಗೇ, ಹಿಂಗು - ಹಿಂಗು, ಬಿಲ್ವ - ಬಿಲ್ವಪತ್ರೆ, ಲಶುನ - ಬೆಳ್ಳುಳ್ಳಿ, ಕ್ಷಾರ - ಲವಣ, ಪಲಾಶೋದ್ಭವ - ಮುತ್ತುಗದ ಬೇರು, ಶ್ರೇಷ್ಠ - ನೆಲತಾವರೆ, ವಾರಿಧಿಶುಕ್ತಿ - ಸಮುದ್ರಮುತ್ತಿನ ಚಿಪ್ಪು, ಪಂಚಲವಣ - ಪಂಚಲವಣ, ಏರಂಡತೈಲ - ಹರಳುತೈಲ, ಸ್ನುಹೀ - ಮುಂಡಗಳ್ಳಿ, ದ್ವಿಕ್ಷರ - ಸದ್ಯಕ್ಷಾರ, ಯವಕ್ಷಾರ, ಗಿರಿಕರ್ಣಿ - ಸಟ್ಟುಗದ ಹಂಬು, ಚಿತ್ರಕ - ಚಿತ್ರಮೂಲ, ಕಣಾಮೂಲ - ಹಿಪ್ಪಲಿಮೂಲ, ಶುಂಠೀ - ಶುಂಠಿ, ತ್ರಿವೃತ್ - ಕೆಂಪುತಿಗಡೆ, ಚ - ಮತ್ತು, ಗೋಮೂತ್ರಾಣಿ - ಗೋಮೂತ್ರ ಇವು, ಸರ್ವೋದರಾಣಿ - ಎಲ್ಲಾ ಉದರರೋಗಗಳನ್ನು, ಸಹಸಾ - ಶೀಘ್ರ-ವಾಗಿಯೂ, ಧ್ರುವಮ್ - ಶಾಶ್ವತವಾಗಿಯೂ, ನಾಶಯಂತಿ - ನಾಶಪಡಿಸುತ್ತವೆ.

ಪಾಂಡುರೋಗಕ್ಕೆ -

**40.** ವ್ಯೋಷವಚಾಘನಚಿತ್ರಕಮಂಡೂರವಿಳಂಗಕಂಚಲೋಹರಜಃ |
ಅಜಮಹಿಷತಕ್ರನಿಶಾದ್ವಯಗೋಮೂತ್ರಂ ಚ ಪಾಂಡುರೋಗಘ್ನಃ ||

ವ್ಯೋಷ - ತ್ರಿಕಟುಕಾ, ವಚಾ - ಬಜೆ, ಘನ - ಕೊನ್ನಾರಿ, ಚಿತ್ರಕ - ಚಿತ್ರಮೂಲ, ❁ಮಂಡೂರ - ದಾಂಡು, ವಿಳಂಗ - ವಾಯುವಿಳಂಗ, ಲೋಹರಜಃ - ಲೋಹದ ಪುಡಿ, ಅಜಮಹಿಷತಕ್ರ - ಆಡು ಎಮ್ಮೆಗಳ ಮಜ್ಜಿಗೆ, ನಿಶಾದ್ವಯ - ಅರಿಸಿನ, ಮರದರಿಸಿನ, ಚ - ಮತ್ತು, ಗೋಮೂತ್ರ - ಗೋಮೂತ್ರ ಇವು, ಪಾಂಡುರೋಗಘ್ನಮ್ - ಪಾಂಡುರೋಗಹರದ್ರವ್ಯಗಳು.

ಕಾಮಿಲರೋಗಕ್ಕೆ -

**41.** ಶುಂಠೀಪಟೋಲಕಟುಕಾಮಲಕಾಬ್ಜಾನಲ
ಮತ್ಸ್ಯೇಕ್ಷಣಾಹಿಮವರೀ ಮಣಿಬಂಧದಾಹಃ |
ಕ್ಷೀರಾಮೃತಾಜ್ಯಮಹಿಷೀಮಥಿತಾಝಟಾಶ್ಚ
ಮುದ್ಗೈಣಶೃಂಗಿವಿಜಯಾನಿ ಚ ಕಾಮಿಲಾಘ್ನಾಃ ||

ಶುಂಠೀ - ಶುಂಠಿ, ಪಟೋಲ - ಕಹಿಪಡವಲ, ಕಟುಕಾ - ಕಟುಕರೋಹಿಣಿ, ಆಮಲಕ - ನೆಲ್ಲಿಚಟ್ಟು, ಅಬ್ಜಾನಲ - ತಾವರೆದಂಟು, ಮತ್ಸ್ಯೇಕ್ಷಣ - ಹೊನಗೊನೆ, ಹಿಮ - ಪಚ್ಚಕರ್ಪೂರ, ವರೀ - ಆಷಾಢಿ, ಮಣಿಬಂಧದಾಹಃ - ಮಣಿಕಟ್ಟಿನಲ್ಲಿ ರಕ್ಷೆ ಹಾಕಿಸುವುದು (ಅಗ್ನಿಕರ್ಮ (ಚಿಟಿಕೆ ಹಾಕುವುದು) ಸುಡುವುದು (ಕಟ್ಟುವುದು)), ಕ್ಷೀರ - ಹಾಲು, ಅಮೃತ - ಅಮೃತಬಳ್ಳಿ, ಆಜ್ಯ - ತುಪ್ಪ, ಮಹಿಷೀಮಥಿತ - ಎಮ್ಮೆ ಮಜ್ಜಿಗೆ, ಝಟಾ - ನೆಲನೆಲ್ಲಿ, ಮುದ್ಗ - ಹೆಸರು, ಏಣಶೃಂಗೀ - ಸಾರಂಗದ

---

❁ ಮಣ್ಡೂರ - ಈ ಶಬ್ದಕ್ಕೆ ಲೋಹದ ಮಲ, ಕಿಲುಬು, ತುಕ್ಕು ಎಂಬ ಅರ್ಥಗಳಿವೆ. ಮೂಲಮಾತೃಕೆಯಲ್ಲಿ ಮಣ್ಡೂರ ಶಬ್ದಕ್ಕೆ ದಾಂಡು ಎಂದು ಅರ್ಥೈಸಲಾಗಿದೆ.

ಕೊಂಬು, ವಿಜಯ - ಮಂಜಿಷ್ಠೆ ಅಥವಾ ಬಜೆ ಇವುಗಳು, ಕಾಮಿಲಘ್ನಾಃ - ಕಾಮಿಲಹರದ್ರವ್ಯಗಳು.

ಶೋಭರೋಗಕ್ಕೆ -

42. ವರ್ಷಾಭೂದಶಮೂಲದಾರುಲಶುನಬ್ರಾಹ್ಮೀಗವಾಕ್ಷೀಶಿವಾ
ರಾಸ್ನಾಶುಕ್ತಿಪುನರ್ನವಾರ್ದ್ರಕಯವಕ್ಷಾರತ್ರಿವೃನ್ಮೋರಟಾ |
ದಂತೀಮುರ್ಮುರಿಪಂಚಕೋಲರಜನೀಕಂಕುಷ್ಠಲೋಹೇಕ್ಷುರಾ
ಗೋಮೂತ್ರಾಜಪುರೀಷಮೂತ್ರಮಥಿತಂ ಶೋಭಂ ಹರಂತ್ಯಂಜಸಾ ||

ವರ್ಷಾಭೂ - ಬಿಳಿಕೊಮ್ಮೆ, ದಶಮೂಲ - ದಶಮೂಲ, ದಾರು - ದೇವದಾರು, ಲಶುನ - ಬೆಳ್ಳುಳ್ಳಿ, ಬ್ರಾಹ್ಮೀ - ಒಂದೆಲಗ, ಗವಾಕ್ಷೀ - ಹಾವುಮೆಕ್ಕೆ, ಶಿವಾ - ಅಳಲೆ, ರಾಸ್ನಾ - ರಾಸ್ಮೆ, ಶುಕ್ತಿ - ಕಪ್ಪೆಚಿಪ್ಪು ಕವಡೆಯ ಹಾಲುಚಿಪ್ಪು, ಪುನರ್ನವಾ - ಕೊಮ್ಮೆ, ಆರ್ದ್ರಕ - ಹಸಿಶುಂಠಿ, ಯವಕ್ಷಾರ - ಯವಕ್ಷಾರ, ತ್ರಿವೃತ್ - ತಿಗಡೆ, ಮೋರಟ - ಸೇಗುಡಿಕೆ, ದಂತೀ - ಖಿಟ್ಟವರ್ತಿಗೆ, ಮುರ್ಮುರಿ - ನಾರಂಬಾಳೆ, ಪಂಚಕೋಲ - ಪಂಚಕೋಲ, ರಜನೀಕ - ಅರಿಸಿನ, ಕುಷ್ಠ - ಚಂಗಲಕೋಷ್ಠ, ಲೋಹೇಕ್ಷುರಾ - ಕೋಲಾವಲಿಕೆ, ಗೋಮೂತ್ರ - ಗೋಮೂತ್ರ, ಅಜಪುರೀಷಮೂತ್ರ - ಆಡಿನ ಹೆಕ್ಕೆ ಮೂತ್ರ, ಮಥಿತ - ಮಜ್ಜಿಗೆ ಇವು, ಅಂಜಸಾ - ಶೀಘ್ರವಾಗಿ, ಶೋಭಂ - ಶೋಭರೋಗವನ್ನು, ಹರಂತಿ - ಪರಿಹರಿಸುತ್ತವೆ.

ವಿಸರ್ಪ (ಕಜ್ಜಿ, ತುರಿ, ಕಡಿತ) ರೋಗಕ್ಕೆ -

43. ಕಲ್ಹಾರೋತ್ಪಲಕಂದಕೇರಮೃದುಪುಷ್ಪಾಂಭೋಽಮೃತಶಾರಿಬಾ
ಗೋಲೋಮೀಶಕುನಾಸಿಕಾಹಿಮಬಿಸಕ್ಷೀರದ್ರುಶೃಂಗಾಂಬುದಾಃ |

ರಕ್ತಾಗ್ರಾಮಯ ನಿಂಬಸೇವ್ಯತುಲಸೀಸರ್ಪಿತುಗಾಶಾರಿಬಾ

ದೂರ್ವಾಯಷ್ಟಿಸಪುಷ್ಪಬೋಧಿಮುನಯೋ ವೈಸರ್ಪಗರ್ವಾಪಹಾಃ ||

ಕಲ್ಹಾರೋತ್ಪಲಕಂದ - ಕಲ್ಹಾರವೆಂಬ ನೈದಿಲ ಗೆಡ್ಡೆ, ಕೇರಮೃದುಪುಷ್ಪ - ತೆಂಗಿನಎಳೆ ಹೊಂಬಾಳೆ, ಅಂಭ - ಕೊನ್ನಾರಿ, ಅಮೃತ - ಅಮೃತಬಳ್ಳಿ, ಶಾರಿಬಾ - ಸೊಗದೆ, ಗೋಲೋಮಿ - ಬಜೆ, ಶುಕನಾಸಿಕ - ಪಲಾಶ, ಹಿಮ - ಪಚ್ಚಕರ್ಪೂರ, ಬಿಸ - ತಾವರೆಗೆಡ್ಡೆ, ಕ್ಷೀರದ್ರುಶೃಂಗ - ಸಾರಂಗದ ಕೊಂಬು, ಅಂಬುದ - ಮುಡಿವಾಳ, ರಕ್ತಾಗ್ರಮಯ - ಕೆಂಪು ಚಂಗಲಕೋಷ್ಠ, ನಿಂಬ - ಬೇವು, ಸೇವ್ಯ - ಲಾವಂಚ, ತುಲಸೀ - ತುಳಸೀ, ಸರ್ಪಿಃ - ತುಪ್ಪ, ತುಗಾ - ತವಕ್ಷೀರ, ಶಾರಿಬಾ - ಸೊಗದೆ, ದೂರ್ವಾ - ಗರಿಕೆ, ಯಷ್ಟಿ - ಅತಿಮಧುರ, ಸಪುಷ್ಪಬೋಧಿಮುನಯಃ - ಅಗಸೆ ಸೊಪ್ಪು ಇವುಗಳು, ವಿಸರ್ಪಗರ್ವಾಪಹಾಃ - ವಿಸರ್ಪಿಹರಗಳು.

ಸಿಡುಬು ರೋಗಕ್ಕೆ -

**44.** ವಾಶಾವರೀನಿಂಬಪಟೋಲಧಾತ್ರೀ

ಬ್ರಾಹ್ಮೀಕುನಿಂಬಾಜ್ಯವಿಭೂತಿದೂರ್ವಾಃ |

ಮಾಧವ್ಯಪಾನಾದ್ಘನಸಾರವಲ್ಲೀ

ತ್ರಾಯಂತೀ ಮುಸ್ತಾ ಚ ಮಸೂರಿಕಾಘ್ನಾಃ ||

ವಾಶ - ಆಡುಸೋಗೆ, ವರೀ - ಆಷಾಢಿ, ನಿಂಬ - ಬೇವು, ಪಟೋಲ - ಕಹಿಪಡವಲ, ಧಾತ್ರೀ - ನೆಲ್ಲಿಚಟ್ಟು, ಬ್ರಾಹ್ಮೀ - ಒಂದಲಗದ ಸೊಪ್ಪು (ಹೊನಗೊನೆ ಸೊಪ್ಪು), ಕುನಿಂಬ - ನೆಲಬೇವು, ಆಜ್ಯ - ತುಪ್ಪ, ವಿಭೂತಿ - ವಿಭೂತಿ, ದೂರ್ವಾ - ಗರಿಕೆ, ಮಾಧವ್ಯಪಾನಾತ್ - ಜೇನುತುಪ್ಪದಿಂದ ತಯಾರಿಸಲ್ಪಟ್ಟದ್ದನ್ನು

ಕುಡಿಯುವಿಕೆ, ಘನಸಾರ - ಕೊನ್ನಾರಿ ಗೆಡ್ಡೆಯ ತಿರುಳು, ವಲ್ಲೀ - ಅಜವಾನ, ತ್ರಾಯಂತೀ - ನಿರಾಮೆಬಳ್ಳಿ, ಚ - ಮತ್ತು, ಮುಸ್ತಾ - ಭದ್ರಮುಸ್ತೆ ಇವು, ಮಸೂರಿಕಾಘ್ನಾಃ - ಸಿಡುಬುರೋಗಹರ ದ್ರವ್ಯಗಳು.

ಶೀತಪಿತ್ತಕ್ಕೆ -

**45.** ಭೂತಿರ್ಮರೀಚಚೂರ್ಣಂ ಸರ್ಷಪಸಹಿತಂ ಗುಳೂಚಿಕಾಪತ್ರಮ್ |
ಸೈಂಧವಚಂದನಸರ್ಪಿಸ್ಸೇವ್ಯ ಚ ನಿಘ್ನಂತಿ ಶೀತಪಿತ್ತಾರ್ತಿಮ್ ||

ಭೂತಿಃ - ಭಸ್ಮ, ಮರೀಚಚೂರ್ಣ - ಮೆಣಸಿನಹಿಟ್ಟು, ಸರ್ಷಪ - ಸಾಸಿವೆ, ಗುಳೂಚಿಕಾಪತ್ರಮ್ - ಅಮೃತ ಬಳ್ಳಿಯ ಎಲೆ, ಸೈಂಧವ - ಸೈಂಧವಲವಣ, ಚಂದನ - ಶ್ರೀಗಂಧ, ಸರ್ಪಿಃ - ತುಪ್ಪ, ಸೇವ್ಯ - ಮುಡಿವಾಳ ಇವು, ಶೀತಪಿತ್ತಾರ್ತಿಮ್ - ಶೀತಪಿತ್ತವನ್ನು ನಿಘ್ನಂತಿ - ಪರಿಹರಿಸುತ್ತವೆ.

ಕುಷ್ಠರೋಗಕ್ಕೆ -

**46.** ವರ್ಷಾಭೂಪಿಚುಮಂದಚಂದನವರಾಶಮ್ಯಾಕಸೇವ್ಯಾವಚಾ
ತ್ರಾಯಂತೀನವಮಲ್ಲಿಕಾಸನಹಟಾಜ್ಯೋತಿಷ್ಮತೀಮಾರ್ತವಃ |
ಜೀಮೂತಾರ್ಕಪಟೋಲಗಂಧಕಶಿಲಾತಾಳಸ್ನುಹೀಮೋರಟಾ
ದಾರ್ವೀವಾಯಸಜಂಬುಕಾಗೃಹಭವೋಧೂಮೋವಿಶಾಲಾ ನಿಶಾ ||

ವರ್ಷಾಭೂ - ಬಿಳಿಕೊಮ್ಮೆ, ಪಿಚುಮಂದ - ಬೇವು, ಚಂದನ - ಶ್ರೀಗಂಧ, ವರಾ - ತ್ರಿಫಲಾ (ಅಳಲೆ, ತಾರೆ, ನೆಲ್ಲಿಕಾಯಿ), ಶಮ್ಯಾಕ - ಕಕ್ಕೆ, ಸೇವ್ಯಾ - ಮುಡಿವಾಳ, ವಚಾ - ಬಜೆ, ತ್ರಾಯಂತೀ - ಕಟ್ಟುವರ್ತೀ ಅಥವಾ ನೀರಾಮೆ ಬಳ್ಳಿ,

ನವಮಲ್ಲಿಕಾ - ವೀರಜಾಜಿ, ಅಸನ - ಹೊನ್ನೆ, ಹಟಾ - ಅಂತರದಾವರೆ, ಜ್ಯೋತಿಷ್ಮತೀ - ಕಂಗಮ್ಮನಬಳ್ಳಿ (ಗಂಗುಗೆ, ಜ್ಯೋತಿಷ್ಮತಿಲತೆ), ಮಾರ್ತವ - ಗರುಗ, ಜೀಮೂತ - ಕಹಿಹೀರೆ, ಅರ್ಕ - ಎಕ್ಕ, ಪಟೋಲ - ಕಹಿಪಡವಲ, ಗಂಧಕ - ಗಂಧಕ, ಶಿಲಾ - ಮಣಿಶಿಲೆ, ತಾಳ - ತಾಳೆ, ಸ್ನುಹೀ - ಮುಂಡಗಳ್ಳಿ, ಮೋರಟ - ಸೇಗುಡಿಕೆ (ಕಬ್ಬಿನ ಬೇರು), ದಾರ್ವೀ - ಮರದರಿಸಿನ, ವಾಯಸಜಂಘು - ಸರಳವೃಕ್ಷದ ಹಾಲುಮಡ್ಡಿ, ಗೃಹಭವೋಧೂಮ - ಇಲ್ಲಣ, ವಿಶಾಲ - ಹಾವುಮೆಕ್ಕೆ, ನಿಶಾ - ಅರಿಸಿನ,

**47.** ಆವರ್ತಂ ನವನೀತ ಶಿಗ್ರುಖದಿರೋತ್ಪನ್ನಶ್ರಿರೀಷದ್ರುಮಾ
ಕಾಸಜಿದ್ಘನಕಾರವಲ್ಲಿಕರಜಾಸೃಜಾರ್ಕವೇಲ್ಲಾನಿ ಚ |
ಬೀಜಂ ವಾಕುಚಿಚಕ್ರಮರ್ದಕವರಾಂಕೋಲಾಶ್ಚ ಭಲ್ಲಾತಕಾ
ಮೂತ್ರಾನ್ಯಷ್ಟಕಕಾಕಮಾಚಿರಖಿಲಂ ಕುಷ್ಠಂ ವಿನಿಘ್ನಂತ್ಯಲಮ್ ||

ಆವರ್ತ - ತುತ್ತಾ, ನವನೀತ - ಬೆಣ್ಣೆ, ಶಿಗ್ರು - ನುಗ್ಗೆ, ಖದಿರೋತ್ಪನ್ನ - ಕಗ್ಗಲಿಮರದ ಗೋಂದು, ಶಿರೀಷದ್ರುಮ - ಬಾಗೇಮರ, ಕಾಸಜಿತ್ - ಭಾರಂಗಿಮರ, ಘನ - ಕೊನ್ನಾರಿ, ಕಾರವಲ್ಲಿ - ಹಾಗಲ, ಕರಜ - ಹೊಂಗೆ, ಅಸೃಜ್ - ಕುಂಕುಮಕೇಸರಿ, ಅರ್ಕ - ಎಕ್ಕ, ಚ - ಮತ್ತು, ವೇಲ್ಲನಿ - ವಾಯುವಿಳಂಗಗಳು, ವಾಕುಚಿ - ಬಾಹುಜಿ ಗಿಡ ಚಕ್ರಮರ್ದಕ - ತಗಚಿಗಿಡ, ವರಾ - ತ್ರಿಫಲ, ಅಂಕೋಲ - ಅಂಕೋಲೆಗಿಡ, ಭಲ್ಲಾತಕ - ಗೇರು, ಬೀಜ - ಇವುಗಳ ಬೀಜ, ಮೂತ್ರಾನ್ಯಷ್ಟಕ - ಮೂತ್ರಾಷ್ಟಕ (ಅಷ್ಟಮೂತ್ರಗಳು), ಕಾಕಮಾಚೀ - ಬೆಲ್ಲಗಣಿಕೆ, ಅಖಿಲಮ್ - ಇವೆಲ್ಲವೂ, ಅಲಂ - ನಿಶ್ಚಿತವಾಗಿ, ಕುಷ್ಠಂ - ಕುಷ್ಠರೋಗವನ್ನು, ನಿಘ್ನಂತಿ - ಪರಿಹರಿಸುತ್ತವೆ.

ಬಿಳಿಯಕುಷ್ಠರೋಗಕ್ಕೆ -

**48.** ನೀಲೀವರಾ ಲಶುನವಾಕುಚಿಲೋಹಚೂರ್ಣಂ
ಶಮ್ಯಾಕಫಲ್ಗುಮಧುಕಾಸನಶಂಖಪುಷ್ಪಮ್ ।
ದ್ವೀಪೀದ್ವಿಪಾಂಜನಮರುಷ್ಕರಮಿತ್ಯಮೂನಿ
ಶ್ವೇತಂ ಹರಂತ್ಯಪಿ ಚ ಕುಷ್ಠಹರೌಷಧಾನಿ ॥

ನೀಲೀ - ನೀಲಿ, ವರಾ - ತ್ರಿಫಲಾ, ಲಶುನ - ಬೆಳ್ಳುಳ್ಳಿ, ವಾಕುಚಿ - ಬಾಗುಂಚಿ, ಲೋಹಚೂರ್ಣ - ಲೋಹದ ಪುಡಿ, ಶಮ್ಯಾಕ - ಕಕ್ಕೆ, ಫಲ್ಗು - ಕಾಡಅತ್ತಿ, ಮಧೂಕ - ಯಷ್ಟಿಮಧುಕ, ಅಸನ - ಹೊನ್ನೆ, ಶಂಖಪುಷ್ಪ - ಅಗಸೆ, ದ್ವೀಪೀ - ಏಲಕ್ಕಿ, ದ್ವೀಪಾಂಜನ - ದ್ವೀಪಾಂಜನ, ಮರುಷ್ಕರ - ಗೇರು ಇವು ಶ್ವೇತಕುಷ್ಠಹರಗಳು. [ಇತ್ಯಮೂನಿ - ಇವುಗಳು, ಚ - ಮತ್ತು, ಕುಷ್ಠಹರೌಷಧಾನಿ - ಕುಷ್ಠರೋಗದ ಔಷಧಗಳು, ಅಪಿ - ಕೂಡ, ಶ್ವಿತ್ರಕುಷ್ಠಂ ಹರಂತಿ - ಶ್ವೇತಕುಷ್ಠವನ್ನು ಪರಿಹರಿಸುತ್ತವೆ.]

ಉದರಕ್ರಿಮಿರೋಗಕ್ಕೆ -

**49.** ಬ್ರಹ್ಮಕ್ಷ್ಮಾರುಹಬೀಜವೇಲ್ಲಜರಶಿಪಥ್ಯಾವಚಾಯಕ್ಷಾದೃಕ್
ನಿರ್ಗುಂಡೀಘನಚಂದನಕ್ರಿಮಿರಿಪುರ್ನಿಂಬಂ ದಳಂ ಕಿಂಶುಕಮ್ ।
ಹಿಂಗ್ವಾಗ್ನೀಕಣಕಾರವೇಲ್ಲಲಶುನಕ್ಷಾರಾಲುಕರ್ಣೀಶಿಫಾ
ವೇತ್ರಾಶ್ಚ ಕ್ರಿಮಿಹಂತ್ಯುರುಷ್ಕರವಚಾಸ್ಸ್ಯುಶ್ಯೋಪನಾಸ್ತಥಾ ॥

ಬ್ರಹ್ಮಕ್ಷ್ಮಾರುಹಬೀಜ - ಮುತ್ತುಗದ ಬೀಜ, ವೇಲ್ಲಜರಸಿ - ಚೇತರಾಸಿ, ಪಥ್ಯಾ - ಅಳಲೆಕಾಯಿ, ವಚಾ - ಬಜೆ, ಯಕ್ಷದ್ರುಕ್ - ಗೆಜ್ಜುಗ, ನಿರ್ಗುಂಡಿ - ಲಕ್ಕಿ, ಘನ

- ಭದ್ರಮುಸ್ತೆ, ಚಂದನ - ಶ್ರೀಗಂಧ, ಕ್ರಿಮಿರಿಪು - ವಾಯುವಿಳಂಗ, ನಿಂಬದಳ - ಬೇವಿನ ಎಲೆ, ಕಿಂಶುಕ - ಮುತ್ತುಗ, ಹಿಂಗು - ಹಿಂಗು, ಅಗ್ನಿ - ಚಿತ್ರಮೂಲ, ಕಣ - ಹಿಪ್ಪಲಿ, ಕಾರವೇಲ್ಲ - ಹಾಗಲಕಾಯಿ, ಲಶುನ - ಬೆಳ್ಳುಳ್ಳಿ, ಕ್ಷಾರಾಲು - ಕ್ಷಾರ, ಕರ್ಣೇಶಿಫಾ - ಇಲಿಕವಿಬೇರು, ವೇತ್ರ - ಬಿದಿರು, ಅರುಷ್ಕರ - ಗೇರು, ವಚಾ - ಬಜೆ ಇವುಗಳ ಸ್ಪ್ರಶ್ಯೋಪನಾಸ್ತಥಾ - ಉಪನಾಹ ಮಾಡಿಸುವುದರಿಂದ, ಕ್ರಿಮೀನ್ ಹಂತಿ - ಉದರಕ್ರಿಮಿರೋಗಗಳನ್ನು ಪರಿಹರಿಸುತ್ತವೆ.

ವಾತರೋಗಕ್ಕೆ -

**50.** ರಾಸ್ನಾಸುರಾಹ್ವದಶಮೂಲಕರಂಜಯುಗ್ಮಂ
ಕುಷ್ಠಾಷ್ಟವರ್ಗವರಣಾರ್ಕಬಲಾಶತಾಹ್ವಾ |
ಏರಂಡಮೋರಟಕುರಂಟಕುಳುತ್ಥಮಾಷಾ
ಕೋರಂಡಕೋಲತಗರಾಗರುರಾತ್ರಿಬೋಳಾಃ ||

ರಾಸ್ನಾ - ರಾಸ್ಮೆ, ಸುರಾಹ್ವ - ದೇವದಾರು, ದಶಮೂಲ - ದಶಮೂಲ, ಕರಂಜಯುಗ್ಮ - ಹೊಂಗೆ, ತಾಪಸಿ, ಕುಷ್ಠ - ಚಂಗಲಕೋಷ್ಠ, ಅಷ್ಟವರ್ಗ - ಅಷ್ಟವರ್ಗ, ವರಣ - ನವಿಲಾಡಿ, ಅರ್ಕ - ಎಕ್ಕ, ಬಲಾ - ಕಲ್ಲಂಗಡಲೆ, ಶತಾಹ್ವ - ಸಬ್ಬಸಿಗೆ, ಏರಂಡ - ಹರಳು (ಔಡಲ), ಮೋರಟ - ಕಬ್ಬಿನ ಬೇರು, ಕುರಂಟ - ಕುರಟಗೆ, ಕುಳುತ್ಥ - ಹುರುಳಿ, ಮಾಷ - ಉದ್ದು, ಕೋರಂಡ - ಹುಣಿಸೆ, ಕೋಲ - ಏಲಚಿ, ತಗರ - ನಂದಿಬಟ್ಟಲು, ಅಗರು - ಅಗರು, ರಾತ್ರಿ - ಅರಿಸಿನ, ಬೋಳಾಃ - ಬೋಳ ಇವುಗಳು,

51. ನಿರ್ಗುಂಡಿಕಾಹರಿತಮಂಜರಿಚಕ್ರತೈಲಂ
ಹಿಂಗುಪ್ರಸಾರಿಣಿಪುನರ್ನವದೇವಧೂಪಾಃ ।
ತಕ್ಕೋಲಗುಗ್ಗುಲುಸುಧಾದ್ವಯಪೀಲುತೈಲ
ಕಾರ್ಪಾಸಬೀಜಸರಲಾಶ್ಚ ನಿಹಂತಿ ವಾತಮ್ ॥

ನಿರ್ಗುಂಡಿಕಾ - ಲಕ್ಕಿ, ಹರಿತಮಂಜರಿ - ಕುಪ್ಪಿ, ಚಕ್ರತೈಲ - ಚಕ್ರಮರ್ದ ವೃಕ್ಷದ ಫಲದಿಂದ ತಯಾರಾದ ತೈಲ, ಹಿಂಗು - ಹಿಂಗು, ಪ್ರಸಾರಿಣೀ - ಮುಳ್ಳಗಸೆ, ಪುನರ್ನವ - ಬಿಳಿಕೊಮ್ಮೆ, ದೇವಧೂಪಾಃ - ಸಾಂಬ್ರಾಣಿ, ತಕ್ಕೋಲ - ತಕ್ಕೋಲ, ಗುಗ್ಗುಲು - ಗುಗ್ಗುಳ, ಸುಧಾದ್ವಯ - ನೆಲ್ಲಿ, ಕಿರುನೆಲ್ಲಿ, ಪೀಲುತೈಲ - ಕಿರಿಗೋಣಿತೈಲ, ಕಾರ್ಪಾಸಬೀಜ - ಹತ್ತಿಬೀಜ, ಸರಲಾಶ್ಚ - ಮತ್ತು ಸರಳದೇವದಾರು ಇವುಗಳು, ವಾತಂ ಹರಂತಿ - ವಾತವನ್ನು ಪರಿಹರಿಸುತ್ತವೆ.

ಪಿತ್ತರೋಗಕ್ಕೆ -

52. ಮತ್ಸ್ಯಾಕ್ಷೀತೃಣಪಂಚಮೂಲಫಲಿನೀಭೂಶರ್ಕರಾಶರ್ಕರಾ
ದ್ರಾಕ್ಷಾವಾಲುಕ ಸೇವ್ಯಗೋಪವನಿತಾಖರ್ಜೂರವಾಶಾಮೃತಾಃ ।
ಭದ್ರಶ್ರೀಘನಸಾರನಿಂಬಮದುಕಾನ್ಯಗ್ರೋಧಬೋಧಿದ್ರುಮಾಃ
ಪ್ಲಕ್ಷೋದುಂಬರಜಂಬುತಿಂದುಕವರೀಧಾತ್ರೀವಿದಾರೀಘನಾಃ ॥

ಮತ್ಸ್ಯಾಕ್ಷೀ - ಹೊನಗೊನೆ, ತೃಣ - ಹುಲ್ಲು, ಪಂಚಮೂಲ - ಪಂಚಮೂಲ, ಫಲಿನೀ - ಪ್ರಿಯಾಂಗ (ಪ್ರೇಂಕಣ), ಭೂಶರ್ಕರಾ - ಸಣ್ಣ ಚೂರು ಮಣ್ಣು (ಭೂಸಕ್ಕರೆ), ಶರ್ಕರಾ - ಸಕ್ಕರೆ, ದ್ರಾಕ್ಷಿ - ದ್ರಾಕ್ಷಿ, ವಾಲುಕ - ಸುರಸುರುಕೆಸೊಪ್ಪು, ಸೇವ್ಯ - ಲಾವಂಚದ ಬೇರು, ಗೋಪವನಿತಾ - ಸೊಗದೆ, ಖರ್ಜೂರ - ಖರ್ಜೂರ,

ವಾಶಾ - ಆಡುಸೋಗೆ, ಅಮೃತಾ - ಅಮೃತಬಳ್ಳಿ, ಭದ್ರಶ್ರೀ - ಶ್ರೀಗಂಧ, ಘನಸಾರ - ಕೊನ್ನಾರಿ ತಿರುಳು, ನಿಂಬ - ಬೇವು, ಮಧುಕಾ - ಯಷ್ಟಿಮಧುಕಾ, ನ್ಯಗ್ರೋಧ - ಆಲ, ಬೋಧಿದ್ರುಮ - ಅರಳಿ, ಪ್ಲಕ್ಷ - ಆಲ, ಉದುಂಬರ - ಅತ್ತಿ, ಜಂಬೂ - ನೇರಳೆ, ತಿಂದುಕ - ತುಂಬೆ, ವರೀ - ಶತಾವರಿ, ಧಾತ್ರೀ - ನೆಲ್ಲಿ, ವಿದಾರೀ - ನೆಲಗುಂಬಳ ಅಥವಾ ಮೂರೆಲೆ ಹೊನ್ನೆ, ಘನಾಃ - ಭದ್ರಮುಸ್ತೆ,

53. ಜೀವಂತೀಘನನಾದದಾಡಿಮಫಲಕ್ಷೀರಾಜ್ಯಕೇರೀಪಯಃ
ದೂರ್ವಾಬಿಂಬಪಟೋಲಮುದ್ಗಝುರಸೀಪುಷ್ಪಂ ಮಧೂಕೋದ್ಭವಮ್ |
ಕನ್ಯಾಹಲ್ಲಕಪದ್ಮಕಂದತಗರಾಣ್ಯೈಲೇಯರಂಭಾಫಲೈಃ
ಪುಷ್ಪೋರ್ವಾರುಫಲಂ ಚ ಶಿಗ್ರುಕುಸುಮಂ ಪಿತ್ತಂ ನಿಹಂತಿ ಧ್ರುವಮ್ ||

ಜೀವಂತೀ - ಸೀಹಾಲೆ, ಘನನಾದ - ಚಿಲುಕೀರೆ, ದಾಡಿಮಫಲ - ದಾಳಿಂಬೆ ಹಣ್ಣು, ಕ್ಷೀರ - ಹಾಲು, ಆಜ್ಯ - ತುಪ್ಪ, ಕೇರೀಪಯಃ - ಎಳನೀರು, ದೂರ್ವಾ - ಗರಿಕೆ, ಬಿಂಬ - ತೊಂಡೆ, ಪಟೋಲ - ಕಹಿಪಡವಲ, ಮುದ್ಗ - ಹೆಸರು, ಝುರಸೀ - ಚೇತರಾಸಿ, ಪುಷ್ಪಮಧುಕೋದ್ಭವ - ಹಿಪ್ಪೆಹೂ, ಕನ್ಯಾಹಲ್ಲಕ - ಎಳೆಯ ಕಮಲ, ಪದ್ಮಕಂದ - ತಾವರೆಗೆಡ್ಡೆ, ತಗರ - ನಂದಿಬಟ್ಟಲು, ಐಲೇಯ - ಸುರಸುರಕೆ, ರಂಭಾಫಲ - ಬಾಳೆಹಣ್ಣು, ಪುಷ್ಪ - ತಾಳೆಹೂ, ಉರ್ವಾರುಫಲಮ್ - ಸೌತೆಕಾಯಿ, ಶಿಗ್ರುಕುಸುಮಮ್ - ನುಗ್ಗೆಹೂವು - ಇವುಗಳು, ಧ್ರುವಮ್ - ನಿಶ್ಚಿತವಾಗಿಯೂ, ಪಿತ್ತಮ್ - ಪಿತ್ತವನ್ನು, ನಿಹಂತಿ - ನಿಯಂತ್ರಿಸುತ್ತದೆ.

ಶ್ಲೇಷ್ಮರೋಗಕ್ಕೆ -

**54.** ಟಂಕಣಕಣಾನತನ್ಮೂಲಮಾಕ್ಷಿಕಬೃಹತೀ
ವಾಶಾಕಸನಜಿದ್ವ್ಯಾಯಾಮಾಸ್ತಿಕ್ತಾಃ |
ಸ್ತ್ರೀಸೇವಾನಿಷ್ಠೀವನಜಲಕ್ರೀಡೋದಾಘಾತ
ಧೂಮವಮನಶಿರೋವಿರೇಚನಶ್ಲೇಷ್ಮಘ್ನಾಃ ||

ಟಂಕಣ - ಬಿಲಗಾರ, ಕಣಾ - ಹಿಪ್ಪಲಿ, ತನ್ಮೂಲ - ಹಿಪ್ಪಲಿಬೇರು, ಮಕ್ಷಿಕ - ಜೇನು, ಬೃಹತೀ - ಹೆಗ್ಗುಳ, ವಾಶಾ - ಆಡುಸೋಗೆ, ಕಸನಜಿತ್ - ಕಾಸಹರ, ತಿಕ್ತಾಃ - ಕಷಾಯರಸಗಳು, ವ್ಯಾಯಾಮ - ಶಾರೀರಿಕ ವ್ಯಾಯಾಮಗಳು, ಸ್ತ್ರೀಸೇವಾ - ಸ್ತ್ರೀಸಂಭೋಗ, ನಿಷ್ಠೀವನ - ಉಗುಳುವುದು, ಜಲಕ್ರೀಡ - ನೀರಿನಲ್ಲಿ ಆಟವಾಡುವುದು, ಉದಾಘಾತ - ನೀರಿನಲ್ಲಿ ಈಜುವುದು, ಧೂಮ - ಧೂಮಸೇವನೆ, ವಮನ - ವಾಂತಿ ಮಾಡುವಿಕೆ, ಶಿರೋವಿರೇಚನ - ನಸ್ಯ ಮಾಡಿಸುವುದು ಎಂಬುದಾಗಿ, ಶ್ಲೇಷ್ಮಘ್ನಾಃ - ಶ್ಲೇಷ್ಮರೋಗಹರಗಳೆಂದು,

**55.** ಪ್ರೋಕ್ತಾನಿ ಯಾನಿ ಪೂರ್ವಂ ಕಾಸಶ್ವಾಸಕ್ಷಯಪ್ರಹಾರೀಣಿ |
ತಾನ್ಯೇವ ಭೇಷಜಾನಿ ಶ್ಲೇಷ್ಮಾಣಂ ಪ್ರಶಮಯಂತಿ ಸರ್ವಾಣಿ ||

ಯಾನಿ - ಯಾವ ಔಷಧೋಪಚಾರಗಳು, ಪ್ರೋಕ್ತಾನಿ - ಹೇಳಲ್ಪಟ್ಟಿತೋ ಮತ್ತು, ಪೂರ್ವಂ - ಮೊದಲು, ಕಾಸಶ್ವಾಸಕ್ಷಯಪ್ರಹರಿಣಿ - ಕೆಮ್ಮು, ಉಬ್ಬಸ, ಕ್ಷಯರೋಗಹರಗಳಾಗಿ ಹೇಳಲ್ಪಟ್ಟ, ತಾನ್ಯೇವ ಸರ್ವಾಣಿ ಭೇಷಜಾನಿ - ಆ ಎಲ್ಲಾ ಔಷಧಿಗಳು, ಶ್ಲೇಷ್ಮಾಣಮ್ - ಶ್ಲೇಷ್ಮರೋಗವನ್ನು, ಶಮಯಂತಿ - ಶಮನಗೊಳಿಸುತ್ತವೆ.

ರಕ್ತವಾತರೋಗಕ್ಕೆ -

56. ರಾಸ್ನಾಮೋರಟಯಾಮಿನೀನಕುಲಿಕಾ ದೇವಾಹ್ವಯಷ್ಟೀಬಲಾ
ವಾಲುಕ್ಯಾದಶಮೂಲಶೈಲಜಟಿಲಾಕ್ಷುದ್ರಸ್ತಥಾ ಕಂಪಿಲಮ್ |
ಧಾನ್ಯಾಮೇಕ್ಷುರುಕೇತಕೀರಸಮಿಶಿಕ್ಷ್ಮಾಪೀಲುಪಂಚಾಂಗುಳಾ
ಸೂರ್ಯಾವರ್ತಗಳಾಮೃತಾಗರುಗದಾವಾತಾಸೃಜೋನಾಶನಾಃ ||

ರಾಸ್ನಾ - ರಾಸ್ಮೆ, ಮೋರಟ - ಕುರಟಿಗೆ, ಯಾಮಿನೀ - ಅರಿಸಿನ, ನಕುಲಿಕಾ - ಕುಂಕುಮಕೇಸರಿ ಅಥವಾ ಜಟಾಮಾಂಸಿ, ದೇವಾಹ್ವ - ದೇವದಾರು, ಯಷ್ಟೀ - ಅತಿಮಧುರ, ಬಲಾ - ಕಲ್ಲಂಗಡಲೆ, ವಾಲುಕ್ಯ - ಸುರಸುರಕೆ, ದಶಮೂಲ - ದಶಮೂಲ, ಶೈಲಜಟಿಲ - ಕಾಡುಹಿಪ್ಪಲಿ, ಕ್ಷುದ್ರ - ಹೆಗ್ಗುಳ, ಕಂಪಿಲ್ಲ - ಕಪಿಲೆಹಿಟ್ಟು ಎಂಬ ಔಷಧ, ಧಾನ್ಯಾ - ಕೊತ್ತುಂಬರಿ, ಇಕ್ಷುರ - ಕೊಲಾವಲಿಕೆ, ಕೇತಕೀರಸ - ತಾಳೆಮರದ ರಸ, ಪೀಲು - ಬಿಗಿನಿಹಣ್ಣು, ಪಂಚಾಂಗುಳಾ - ಏರಂಡ, ಸೂರ್ಯಾವರ್ತ - ಸೂರ್ಯಾವರ್ತಿ, ಅಮೃತ - ಅಮೃತಬಳ್ಳಿ, ಅಗರು - ಅಗರುಚಂದನ ಇವುಗಳು, ಗದಾ - ರೋಗಿಯ, ವಾತಸೃಜೋನಾಶನಾಃ - ವಾತರಕ್ತವನ್ನು ನಾಶಪಡಿಸುತ್ತವೆ.

ಆವೃತರೋಗಕ್ಕೆ -

57. ಜೀವಂತೀಕಣಾಶ್ವಗಂಧದ್ವಿಪಪಂಚಮೂಲಾನಿ |
ಏಲೇಯಕಲಶುನಬಲಾಮಧುಕಾನಿ ಚ ನಿಯತಮಾವೃತಘ್ನಾನಿ ||

ಜೀವಂತೀ - ಸಿಹಿಹಾಲೆ, ಕಣಾ - ಹಿಪ್ಪಲಿ, ಅಶ್ವಗಂಧ - ಅಶ್ವಗಂಧ, ದ್ವಿಪ - ಮರದರಿಸಿನ, ಪಂಚಮೂಲಾನಿ - ಪಂಚಮೂಲ, ಏಲೇಯಕ - ಏಲಕ್ಕಿ, ಲಶುನ -

ಬೆಳ್ಳುಳ್ಳಿ, ಬಲಾ - ಕಲ್ಲಂಗಡಲೆ, ಚ - ಮತ್ತು, ಮಧುಕಾನಿ - ಯಷ್ಟಿ-ಮಧುಕಗಳು ನಿಯತಮ್ - ನಿಶ್ಚಯವಾಗಿಯೂ, ಆವೃತರೋಗಘ್ನಾನಿ - ಆವೃತಹರರೋಗಗಳು.

ಅತಿಸ್ಥೂಲರೋಗಕ್ಕೆ -

**58.** ವಿಳಂಗಕಾಲಾಯಸಚೂರ್ಣತೈಲಕುಳುತ್ಥಗುಗ್ಗುಲ್ವಸನಾನಲಾಶ್ಚ |
ಶಿಲಾಹ್ವಪಥ್ಯಯವಯವಶೂಕ ಕ್ಷೌದ್ರಾಣ್ಯತಿಸ್ಥೌಲ್ಯನಿಬರ್ಹಣಾನಿ ||

ವಿಳಂಗ - ವಾಯುವಿಳಂಗ, ಕಾಲಾಯಸ - ಕಬ್ಬಿಣ, ಚೂರ್ಣ - ಸುಣ್ಣ, ತೈಲ - ಎಳ್ಳೆಣ್ಣೆ, ಕುಳುತ್ಥ - ಹುರುಳಿ, ಗುಗ್ಗುಲು - ಗುಗ್ಗುಳ, ಅಸನ - ಹೊನ್ನೆ, ಚಿತ್ರಮೂಲ - ಚಿತ್ರಮೂಲ, ಶಿಲಾಹ್ವ - ಶಿಲಾಜಿತು, ಪಥ್ಯ - ಅಳಲೆ, ಯವ - ಗೋಧಿ, ಯವಶೂಕ - ಗೋಧಿತೆನೆಯ ಮುಳ್ಳು, ಕ್ಷೌದ್ರ - ಜೇನುತುಪ್ಪ ಇವುಗಳು, ಅತಿಸ್ಥೌಲ್ಯಾನಿ - ಅತಿಸ್ಥೂಲ ಉಂಟು ಮಾಡುವ ರೋಗಗಳನ್ನು, ನಿಬರ್ಹಣಾನಿ - ಶಮನ ಮಾಡುತ್ತವೆ.

ಅತಿಕೃಶಕ್ಕೆ -

**59.** ವಿದಾರಿಕೂಷ್ಮಾಂಡತುರಂಗಗಂಧಾ
ಕ್ಷೀರಂ ಘೃತಂ ಮಾಂಸರಸಃ ಪಯಶ್ಚ |
ವರೀಕುಮಾರೀದಧಿಮಹಿಷಂ ಚ
ಕೃಶಸ್ಯ ಕಾರ್ಶ್ಯಂ ಚ ನಿಹಂತಿ ಸದ್ಯಃ ||

ವಿದಾರಿ - ನೆಲಗುಂಬಳ, ಕೂಷ್ಮಾಂಡ - ಬೂದಿಗುಂಬಳ, ತುರಂಗಗಂಧಾ - ಅಶ್ವಗಂಧಿ, ಕ್ಷೀರ - ಹಾಲು, ಘೃತ - ತುಪ್ಪ, ಮಾಂಸರಸ - ಮಾಂಸದ ರಸ, ಪಯಃ - ನೀರು, ವರೀಕುಮಾರೀ - ಶತಾವರಿ, ಚ - ಮತ್ತು, ದಧಿಮಾಹಿಷ -

ಎಮ್ಮೆಯ ಮೊಸರು, ಕೃಶಸ್ಯ - ತೆಳ್ಳಗಿರುವವನ, ಕಾರ್ಶ್ಯಮ್ - ಕೃಶತೆಯನ್ನು, ನಿಹಂತಿ - ನಾಶಮಾಡುತ್ತವೆ.

ಬಂಜೆತನಕ್ಕೆ -

**60.** ಶಾಙ್ರ್ಜೇಷ್ಟಾಹಯಗಂಧಿಕಧನದದೃಗ್ಲಕ್ಷ್ಮೀವರೀಮಾಷಕೀ
ಮೂಲಂ ಶುಕ್ತಿಪುನರ್ನವಸ್ಯ ಚ ತಥಾ ಶ್ವೇತಶ್ಚ ಪೂಲಾಸಕಃ |
ಕ್ಷೀರಿಣ್ಯಾ ಅಪಿ ದಾಡಿಮದ್ವಯಪಟುರ್ಮಂದಾರ್ಕಮೌದುಂಬರಂ
ವಂಧ್ಯಾಸ್ತಿ ಹ್ಯುದಯಾರ್ತಮಜ್ಜನದಿನೇ ಪೀತ್ವಾ ಪ್ರಸೂತೇ ಸುತಾತ್ ||

ಶಾಙ್ರ್ಜೇಷ್ಟಾ - ಅಂಗಾರವಲ್ಲಿಕಾ, ಹಯಗಂಧಿಕ - ಅಶ್ವಗಂಧ, ಧನದ - ಚಿತ್ರಕ, ವರೀ - ಶತಮೂಲಿ, ಮಾಷಕೀ - ಉದ್ದು, ಮೂಲ - ಮೂಲಂಗಿ (ಹಿಪ್ಪಲಿ ಬೇರು), ಶುಕ್ತಿ - ಕಪ್ಪೆಚಿಪ್ಪು, ಪುನರ್ನವ - ಬಿಳಿಕೊಮ್ಮೆ, ಶ್ವೇತಸ್ಯ - ಬಿಳಿಯ ಜೀರಿಗೆಯ, ಪುಲಾಸಕ - ಧಾನ್ಯ, ಕ್ಷೀರಿಣ್ಯ - ಆಲದ ರಸ ಇತ್ಯಾದಿ, ದಾಡಿಮದ್ವಯ - ಎರಡು ರೀತಿಯ ದಾಳಿಂಬೆ, ಪಟು - ಉಪ್ಪು, ಮಂದಾರ್ಕ - ಮೃದುವಾದ ಎಕ್ಕ, ಔದುಂಬುರಮ್ - ಅತ್ತಿ ಇವುಗಳನ್ನು, ಆರ್ತ - ಋತುಕಾಲದಲ್ಲಿ, ಮಜ್ಜನದಿನೇ - ತಲೆಗೆ ಸ್ನಾನ ಮಾಡಿದ ದಿನ, ಉದಯ - ಸೂರ್ಯೋದಯ ಕಾಲದಲ್ಲಿ, ಪೀತ್ವಾ - ಕುಡಿದರೆ, ವಂಧ್ಯಾಸ್ತಿ - ಬಂಜೆತನ ಇರುವವರು, ಸುತಾನ್ - ಮಕ್ಕಳನ್ನು, ಪ್ರಸೂತೇ - ಹಡೆಯುತ್ತಾರೆ.

ಗರ್ಭಿಣಿಯರಿಗೆ -

**61.** ನವನೀತದುಗ್ಧಸರ್ಪಿರ್ಜಾಂಗಲ-
ಪಿಶಿತರಸಜೀವನೀಯ್ಯಾನಿ |

ಅನ್ಯಾನಿ ಚ ಮಧುರಾಣಿ ದ್ರವ್ಯಾಣಿ

ಸುಖಂ ಚ ದಿಶಂತಿ ಗರ್ಭಿಣ್ಯಾಃ ||

ನವನೀತ - ಬೆಣ್ಣೆ, ದುಗ್ಧ - ಹಾಲು, ಸರ್ಪಿಃ - ತುಪ್ಪ, ಜಾಂಗಲಪಿಶಿತಸ್ಯ - ಕಾಡುಮೃಗಗಳ ಮಾಂಸದ ರಸ, ಜೀವನೀಯ್ಯಾನಿ - ನೀರು, ಸಿಹಿಹಾಲೆ ಮುಂತಾದ ಜೀವನೀಯಗಣದ್ರವ್ಯ, ಅನ್ಯಾನಿ - ಬೇರೆ, ಮಧುರಾಣಿ ದ್ರವ್ಯಾಣಿ - ಸಿಹಿ ಪದಾರ್ಥಗಳು, ಗರ್ಭಿಣ್ಯಾಃ - ಗರ್ಭಿಣಿಗೆ, ಸುಖಮ್ - ಸುಖವನ್ನು, ದಿಶಂತಿ - ಕೊಡುತ್ತವೆ.

ಸುಖಪ್ರಸವಕ್ಕಾಗಿ -

62. ಯೋನೌ ಲೇಪನಧೂಪನಂ ಗದಫಣಿತ್ವಗ್ಲಾಂಗಲೀಸರ್ಷಪೈಃ
ವೇಣ್ಯಾಸ್ಪರ್ಶನಮಾಶುತಾಲುಗಳಯೋರ್ಮೂರ್ಧ್ನ್ಯಾಹಿತಂ ಸ್ನುಕ್ಪಯಃ |
ತಾಳೀಸಾಗರುಕಲ್ಕಪಾನಮಥವಾ ಮುಂಡೇನ ಹಾಲಾಗುವಾ
ಪಾಣ್ಯಂಘ್ರ್ಯೋರ್ಥ ಸುವರ್ಚಲಾಂ ಪರಿಣತಾಂ ಕುರ್ಯಾತ್ಪ್ರಸೂತೇ
ಸುಖಮ್ ||

ಯೋನೌ - ಯೋನಿಯಲ್ಲಿ, ಫಣಿತ್ವಕ್ - ಹಾವಿನಪೊರೆ, ಲಾಂಗಲೀ - ನೀರುಹಿಪ್ಪಲಿ, ಸರ್ಷಪೈಃ - ಸಾಸಿವೆಗಳಿಂದ, ಲೇಪನಧೂಪನಮ್ - ಲೇಪನ ಹಾಗೂ ಧೂಪವನ್ನು ಕೊಡುವುದು, ಆಶು - ಬೇಗನೆ (ಶೀಘ್ರವಾಗಿ), ವೇಣ್ಯಾ ಸ್ಪರ್ಶನಮ್ - ಕೂದಲನ್ನು (ಜಡೆಯಿಂದ) ಸ್ಪರ್ಶಿಸಬೇಕು. ತಾಲುಗಳಯೋರ್ಮೂರ್ಧ್ನಿ - ಅಂಗಳು, ಕುತ್ತಿಗೆ, ತಲೆಯ ಮೇಲೆ, ಸ್ನುಕ್‌ಪಯಃ - ಮುಂಡಗಳ್ಳಿಯ ಹಾಲನ್ನು, ಆಹಿತಮ್ - ಹಾಕುವುದು. ತಾಳಿಸ - ತಾಲೀಸಪತ್ರೆ, ಅಗರು - ಅಗರು, ಕಲ್ಕ -

ಕಲ್ಕವನ್ನು (ಅರೆದು ಮಾಡಿದ್ದು), ಪಾನಮ್ - ಕುಡಿಸುವುದು, ಅಥವಾ - ಅಥವಾ, ಮಂಡೇನ - ಗಂಜಿಯೊಡನೆ, ಹಾಲಾಭುವಾ - ಮದ್ಯದೊಡನೆ (ಕಲ್ಕವನ್ನು), ಪಾನಮ್ - ಕುಡಿಸುವುದು. ಪಾಣ್ಯಂಘ್ರ್ಯೋಽಥ - ಎರಡು ಕೈಗಳನ್ನು ಕಾಲಿನ ಬೆರಳುಗಳನ್ನು, ಪರಿಣತಾಂ ಸುವರ್ಚಲಾ - ಪಕ್ವವಾದ ಅಗಸೆಸೊಪ್ಪಿನಿಂದ ಶಾಖ ಬರುವಂತೆ ಉಜ್ಜುವುದನ್ನು, ಕುರ್ಯಾತ್ - ಮಾಡಬೇಕು. ಇದರಿಂದ, ಪ್ರಸೂತೇ ಸುಖಮ್ - ಸುಖವಾಗಿ ಹೆರಿಗೆಯಾಗುತ್ತದೆ.

ಬಾಲರೋಗಕ್ಕೆ -

**63.** ಶಮನಾನಿ ಯಾನಿ ಯೋಷಾ ಭೇಷಜಜಾತಾನಿ ತಾನಿ ತೀಕ್ಷ್ಣಾನಿ |
ತೇಷು ಗದೇಷು ಶಿಶೂನಾಮುಪಯುಂಜ್ಯಾನ್ ಮಾತ್ರಯಾ ಕನೀಯ್ಯಸ್ಯಾ ||

ಯೋಷಾ ಭೇಷಜಶಮನಾನಿ - ಸ್ತ್ರೀಯರ ರೋಗಗಳ ಉಪಶಮನಕ್ಕಾಗಿ, ಯಾನಿ ತೀಕ್ಷ್ಣಾನಿ - ಯಾವ ತೀಕ್ಷ್ಣವಾದ ಔಷಧಗಳನ್ನು ಬಳಸುತ್ತೇವೋ, ತೇಷು - ಆ ಔಷಧಗಳಲ್ಲಿ, ಶಿಶೂನಾಂಗದೇಷು - ಮಕ್ಕಳ ರೋಗಗಳಲ್ಲಿ, ಕನೀಯಸ್ಯ ಮಾತ್ರಾಯ - ಅಲ್ಪಪ್ರಮಾಣದಿಂದ, ಉಪಯುಂಜ್ಯಾನ್ - ಉಪಯೋಗಿಸಬೇಕು.

ಬಾಲಗ್ರಹಕ್ಕೆ -

**64.** ಸರ್ಪತ್ವಗ್ ಘೃತಕುಷ್ಠಸರ್ಷಪವಚಾ ಗೋಶೃಂಗಪಾಠಾತ್ರಿವೃತ್
ಕಾರ್ಪಾಸಾಸ್ಥಿಸುರದ್ರುಭೂರ್ಜರಜನೀ ನಿಂಬಚ್ಛದೈರ್ಧೂಪನಮ್ |
ಸ್ನಾನಂ ಜಂಬುಕಪಿತ್ಥಕಿಂಶುಕಬಲಾಕ್ಷೀರದ್ರುಶುದ್ಧಾಂಬುನಾ
ತತ್ತನ್ನಾಮ್ನಸಬಲಿಶ್ಚ ಸತ್ಕ್ರಮಕೃತೋ ಬಾಲಗ್ರಹಾನ್ ನಾಶಯೇತ್ ||

ಸರ್ಪತ್ವಕ್ - ಹಾವಿನಪೊರೆ, ಘೃತ - ತುಪ್ಪ, ಕುಷ್ಠ - ಚಂಗಲಕೋಷ್ಠ, ಸರ್ಷಪ - ಸಾಸಿವೆ, ವಚಾ - ಬಜೆ, ಗೋಶೃಂಗ - ಹಸುವಿನ ಕೊಂಬು, ಪಾಠಾ - ಅಗರುಶುಂಠಿ, ತ್ರಿವೃತ್ - ತಿಗಡೆ, ಕಾರ್ಪಾಸಾಸ್ಥಿ - ಹತ್ತಿಯ ಬೀಜ, ಸುರದ್ರು - ಪಾರಿಜಾತ, ಭೂರ್ಜರಜನೀ - ಭೂರ್ಜಪತ್ರೆ, ನಿಂಬಚ್ಛದ - ಬೇವಿನ ಎಲೆ - ಇವುಗಳಿಂದ, ಧೂಪನಮ್ - ಕೊಡುವ ಹೊಗೆ (ಧೂಪ), ಜಂಬೂ - ನೇರಳೆ, ಕಪಿತ್ಥ - ಬೇಲ, ಕಿಂಶುಕ - ಮುತ್ತುಗ, ಬಲಾ - ಅರಿಸಿನ, ಕ್ಷೀರದ್ರು - ಆಲ ಇವುಗಳ, ಶುದ್ಧಾಂಬುನಾ - ಶುದ್ಧವಾದ ನೀರಿನಿಂದ, ಸ್ನಾನಮ್ - ಸ್ನಾನ, ಸತ್ಕ್ರಮಕೃತೋ - ಕ್ರಮವಾಗಿ ಮಾಡಿದ, ತತ್ತನ್ಮಾಸಬಲಿಶ್ಚ - ಆಯಾಯಾ ತಿಂಗಳ ಭೂತಬಲಿ - ಇವುಗಳು, ಬಾಲಗ್ರಹಾನ್ - ಬಾಲಗ್ರಹರೋಗಗಳನ್ನು, ನಾಶಯೇತ್ - ನಾಶಮಾಡುತ್ತವೆ.

ಭೂತಗ್ರಹಕ್ಕೆ -

**65.** ಧೂಪೋ ಹಿಂಗುರಸೋನಕೇಶಬೃಹತೀನಿಂಬಚ್ಛದಾಜ್ಯಕ್ಷಪಾ
ಸಿದ್ಧಾರ್ಥದ್ವಿಪದಂತಗುಗ್ಗುಲುವಚಾನಿರ್ಮಾಲ್ಯಬರ್ಹಿಚ್ಛದೈಃ |
ಪಾನಂ ಭೂಮಿಕದಂಬ ಹಂಸಪದಿಕಾಭೂತಾಂಕುಶತ್ವಗ್ರುಜಾ-
ಸ್ತತ್ತದ್ವಾಂಚಿತವಸ್ತುಭಿಶ್ಚ ಬಲಯೋಭೂತಂನಯೇಯುಶ್ಶಮಮ್ ||

ಹಿಂಗು - ಇಂಗು, ರಸೋನ - ಬೆಳ್ಳುಳ್ಳಿ, ಕೇಶ - ಲಾವಂಚ, ಬೃಹತೀ - ಹೆಗ್ಗುಳ್ಳ, ನಿಂಬಚ್ಛದ - ಬೇವಿನ ಎಲೆ, ಆಜ್ಯ - ತುಪ್ಪ, ಕ್ಷಪಾ - ಅರಿಸಿನ, ಸಿದ್ಧಾರ್ಥ - ಬಿಳಿಸಾಸಿವೆ, ದ್ವಿಪದಂತ - ಆನೆದಂತ, ಗುಗ್ಗುಲು - ಗುಗ್ಗುಳ, ವಚಾ - ಬಜೆ, ನಿರ್ಮಾಲ್ಯ - ದೇವತಾ ನಿರ್ಮಾಲ್ಯ, ಬರ್ಹಿಚ್ಛದೈಃ - ನವಿಲುಗರಿಗಳು ಇವುಗಳಿಂದ, ಕ್ಷಪಾ - ರಾತ್ರಿಯಲ್ಲಿ, ಧೂಪಃ - ಹೊಗೆ ಹಾಕುವುದು. ಭೂಮಿಕದಂಬ - ಕದಂಬ

(ಶ್ರಾವಣಿ), ಹಂಸಪದಿಕಾ - ಹಂಸಪಾದೀ ಲತೆ ಇವುಗಳ, ತ್ವಕ್ - ತೊಗಟೆಯ ಕಷಾಯವನ್ನು, ಪಾನವ್ - ಕುಡಿಯುವಿಕೆ, ಭೂತಾಂಕುಶ - ಭೂತಗಳಿಗೆ ಅಂಕುಶವಾಗುತ್ತದೆ. ರುಜಾಃ - ಈ ಪಂಚಭೂತಸಂಬಂಧವಾದ ರೋಗಗಳು, ತತ್ತದ್ವಾಂಛಿತವಸ್ತುಭಿಶ್ಚ - ಆಯಾಯಾ ಭೂತಗಳ ಇಚ್ಛೆಗೆ ಅನುಸಾರವಾಗಿ, ಬಲಯೋಭೂತಮ್ - ಉಪಹಾರ ನೀಡುವುದರಿಂದ ಭೂತಗ್ರಹವು, ಶಮಂ ನಯೇಯುಃ - ಶಮನಗೊಳ್ಳುತ್ತದೆ.

ಉನ್ಮಾದರೋಗಕ್ಕೆ -

**66.** ದ್ರಾಕ್ಷಾಂಭೋತರು ಲೋಹಿತಾಂಗಮಧುಕಾಸ್ತನ್ಯೇಕ್ಷುಗೋರೋಚನಂ
ಶಾರ್ದೂಲಾಮಿಷಪುಷ್ಪಚಂದನವರೀ ಬ್ರಾಹ್ಮೀಪಯೋದಾವರಾಃ |
ತೀಕ್ಷ್ಣಂ ನಾವನಮಂಜನಂ ಪ್ರಹರಣಂ ಸಂತ್ರಾಸನಂ ತರ್ಜನಂ
ಕಿಂಚಿತ್‌ಶ್ವಾಸನಹರ್ಷಣಂ ಚ ಶಮಯಂತ್ಯುನ್ಮಾದಮತ್ಯುಲ್ಬಣಮ್ ||

ದ್ರಾಕ್ಷಾ - ದ್ರಾಕ್ಷಿ, ಅಂಭೋತರು - ತಾವರೆಗಿಡ, ಲೋಹಿತಾಂಗ - ಕುಂಕುಮ ಕೇಸರಿ, ಮಧುಕಾ - ಯಷ್ಟಿಮಧುಕಾ, ಸ್ತನ್ಯ - ಮೊಲೆಹಾಲು, ಇಕ್ಷು - ಕಬ್ಬು, ಗೋರೋಚನ - ಗೋರೋಚನ, ಚಂದನ - ಶ್ರೀಗಂಧ, ವರೀ - ಶತಾವರಿ, ಬ್ರಾಹ್ಮೀ - ಒಂದಲಗ ಅಥವಾ ಹೊನಗೊನೆ, ಪಯೋದಾ - ಕೊನ್ನಾರಿಗೆಡ್ಡೆ, ವರಾಃ - ತ್ರಿಫಲಾ, ತೀಕ್ಷ್ಣಮ್ - ಯವಕ್ಷಾರ, ನಾವನಮ್ - ಯಾಚಿಸುವುದು, ಅಂಜನಮ್ - ಅಂಜನ ಹಾಕುವುದು, ಪ್ರಹರಣಮ್ - ಹೊಡೆಯುವುದು, ಸಂತ್ರಾಸನಮ್ - ಚೆನ್ನಾಗಿ ಹೆದರಿಸುವುದು, ತರ್ಜನಮ್ - ಬಯ್ಯುವುದು, ಕಿಂಚಿತ್‌ಶ್ವಾಸನಮ್ - ಸ್ವಲ್ಪಮಟ್ಟಿಗೆ ಶ್ವಾಸನಿರೋಧ, ಚ - ಮತ್ತು, ಹರ್ಷಣಮ್ - ಸಂತೋಷ

ಗೊಳಿಸುವುದು ಇವೆಲ್ಲವೂ, ಅತ್ಯುಲ್ಬಣಮ್ ಉನ್ಮಾದಮ್ - ಅತ್ಯಧಿಕವಾಗಿರುವ ಉನ್ಮಾದವನ್ನು, ಶಮಯಂತಿ - ಶಮನಗೊಳಿಸುತ್ತವೆ.

ಅಪಸ್ಮಾರರೋಗಕ್ಕೆ -

**67.** ಗೋಜಿಹ್ವಾಶ್ವಸೃಗಾಲನಾಗನಕುಲೀಮಾರ್ಜಾಲಗೋಧಾಭುವಾ
ಪಿತ್ತೇನ ತ್ರಿಫಲಾಕರಂಜಲಶುನವ್ಯೋಷಶ್ಚ ನಶ್ಯಂ ಮುಹುಃ |
ಪಾನಂ ಪಂಚಕಗವ್ಯಶಂಖಕುಸುಮಂ ಬ್ರಾಹ್ಮೀವರೀಶಾರಿಭಾ
ಪುಷ್ಪಾಣಾಂ ಚ ಹರಂತ್ಯಪಸ್ಮೃತಿರುಜಂ ಧೂಪಂ ಚ ಪಕ್ಷಿಚ್ಛದೈಃ ||

ಗೋಜಿಹ್ವಾ - ಗೋಜಿಹ್ವಾ, ಅಶ್ವ - ಕುದುರೆ, ಸೃಗಾಲ - ನರಿ, ನಾಗ - ಆನೆ, ನಕುಲೀ - ಹೆಣ್ಣು ಮುಂಗುಸಿ, ಮಾರ್ಜಾಲ - ಬೆಕ್ಕು, ಗೋಧಾ - ನೀರುಡ (ಉಡ) ಇವುಗಳ, ಪಿತ್ತೇನ ಭುವಾ - ಪಿತ್ತಗಳಿಂದಾದ ಔಷಧ. ತ್ರಿಫಲಾ - ಅಳಲೆ, ತಾರೆ, ನೆಲ್ಲಿಕಾಯಿ, ಕರಂಜ - ಹೊಂಗೆ, ಲಶುನ - ಬೆಳ್ಳುಳ್ಳಿ, ಚ - ಮತ್ತು, ವ್ಯೋಷೈಃ - ತ್ರಿಕಟುಕಗಳಿಂದ, ಮುಹುಃ - ಮತ್ತೆ ಮತ್ತೆ, ನಶ್ಯಮ್ - ನಶ್ಯಕರ್ಮವನ್ನು ಮಾಡಿಸುವುದು, ಪಂಚಕಗವ್ಯ - ಪಂಚಗವ್ಯ, ಶಂಖಕುಸುಮಮ್ - ಶಂಖಪುಷ್ಪೀ, ಬ್ರಾಹ್ಮೀ - ಒಂದೆಲಗ ಅಥವಾ ಹೊನಗೊನೆ, ವರೀ - ಶತಾವರಿ, ಶಾರಿಭಾ - ಸೊಗದೆ ಇವುಗಳ ಕಷಾಯಾದಿಗಳನ್ನು, ಪಾನಮ್ - ಕುಡಿಸುವುದು. ಪುಷ್ಪಾಣಾಮ್ - ಹೂವುಗಳಿಂದ, ಚ - ಮತ್ತು, ಪಕ್ಷಚ್ಛದೈಃ - ಪಕ್ಷಿಗಳ ಗರಿಗಳಿಂದ, ಧೂಪಮ್ - ಹೊಗೆ ಕೊಡಿಸುವುದು ಇವು, ಅಪಸ್ಮೃತಿರುಜಮ್ - ಅಪಸ್ಮಾರ ರೋಗವನ್ನು, ಹರಂತಿ - ನಾಶಗೊಳಿಸುತ್ತವೆ.

ಕಣ್ಣಿನ ರೋಗಕ್ಕೆ -

68. ಸೌವೀರಾಂಜನಶಂಖತುತ್ಥಯುಗಲೀಸಿಂಧೂತ್ಥಪುಷ್ಪಾಂಜನಂ
ಸ್ರೋತೋಂऽಜಸ್ಸ್ಫಟಿಕೇಂದುಚಂದನಕಣಾ ಪಾಠಾಬ್ಧಿಫೇನಕ್ಷಪಾ |
ದಾರ್ವೀಗೈರಿಕಗಂದತಾಳಕಶಿಲಾಸುತಾಹಿಕಾಶೀಸಕಾ
ಜಾತೀಕೋಶರಸಾಂಜನೇ ಚ ಮಧುಕಂ ಪತ್ರಂ ಚ ಚಿಂಚಾಫಲಮ್ ||

ಸೌವೀರಾಂಜನ - ಎಲಚಿಯ ಕಾಡಿಗೆ, ಶಂಖತುತ್ಥಯುಗಲೀ - ಶಂಖತುತ್ಥ, ಮೈಲುತುತ್ಥ, ಸಿಂಧೂತ್ಥ - ಸೈಂಧವಲವಣ, ಪುಷ್ಪಾಂಜನ - ಹೂವಿನಿಂದಾದ ಕಾಡಿಗೆ, ಸ್ರೋತೋಂऽಜಃ - ಸೌವೀರಾಂಜನ, ಸ್ಫಟಿಕೇಂದು - ಚಂದ್ರಕಾಂತಶಿಲೆ, ಚಂದನ - ಶ್ರೀಗಂಧ, ಕಣಾ - ಹಿಪ್ಪಲಿ, ಪಾಠಾ - ಅಗಳುಶುಂಠಿ, ಅಬ್ಧಿಫೇನ - ಸಮುದ್ರದ ನೊರೆ, ಕ್ಷಪಾ - ಅರಿಸಿನ, ದಾರ್ವೀ - ಮರದರಿಸಿನ, ಗೈರಿಕ - ಗೈರಿಕಧಾತು, ಗಂಧ - ಕೆಂಪುಗಂಧ, ತಾಳಕ - ತಾಳೆ, ಶಿಲಾ - ಮಣಶಿಲೆ, ಸುತಾಹಿ - ದ್ರುಮತಿ, ಕಾಸೀಸಕ - ಅನ್ನಭೇದಿ, ಜಾತೀ - ಜಾಜಿ, ಕೋಶರಸಾಂಜನೇ ಚ - ಲಾವಂಚ ಮತ್ತು ರಸಾಂಜನ, ಮಧುಕಮ್ - ಯಷ್ಟಿಮಧುಕಾ, ಪತ್ರಂ ಚ ಚಿಂಚಾಫಲಮ್ - ಹುಣಸೆಸೊಪ್ಪು ಮತ್ತು ಹಣ್ಣು,

69. ರತ್ನಾನಾಂ ನವಕಂ ಗವಾದಿದಶನಂ ಶೃಂಗಾಣಿ ತೇಷಾಂ ವಚಾ
ಹೇಮಾದ್ಯಾ ಅಪಿ ಧಾತವೋ ಶ್ರುತಿಮಲೋಬೋಧಿದ್ರುಪತ್ರೋತ್ಪಲಮ್|
ಶ್ವೇತಕ್ಷ್ಮಾಧರಕನ್ಯಹಂಸಪದಿಕ್ಷೀರಿಣ್ಯಪಿದಾಡಿಮಂ ಚ
ಮೂಲಂ ಶುಕ್ತಿಪುನರ್ನವಾದ್ರ್ರಕತಕಂ ಲೋಧ್ರಂ ಸಿತಾ ಕುಂಕುಮಮ್ ||

ರತ್ನಾನಾಂ ನವಕಮ್ - ನವರತ್ನಗಳು (ಮುತ್ತು, ಮಾಣಿಕ್ಯ, ವೈಡೂರ್ಯ, ಗೋಮೇಧಾ, ಹವಳ, ವಜ್ರ, ಪುಷ್ಪರಾಗ, ಮರಕತ, ನೀಲ), ಗವಾದಿದಶನಮ್ - ಹಸು ಮೊದಲಾದವುಗಳು, ತೇಷಾಮ್ - ಅವುಗಳ, ಶೃಂಗಾಣಿ - ಕೊಂಬುಗಳು, ವಚಾ - ಬಜೆ, ಹೇಮಾದ್ಯಾ ಅಪಿ ಧಾತವೋ ಶ್ರುತಿಮಲಿ - ಶೋಧಿಸಿದ ಚಿನ್ನ ಮೊದಲಾದ ಧಾತುಗಳು, ಬೋಧಿದ್ರುಪತ್ರ - ಬೋಧಿವೃಕ್ಷದ ಎಲೆ, ಉತ್ಪಲಮ್ - ಕನ್ನೈದಿಲೆ ಹೂವು, ಶ್ವೇತ - ಬಿಳಿಜೀರಿಗೆ, ಕ್ಷ್ಮಾಧರಕನ್ಯ - ಬೆಟ್ಟದಲ್ಲಿ ಬೆಳೆದ, ಹಂಸಪದಿಕಾ - ಹಂಸಪಾದಿಲತೆ, ಕ್ಷೀರಿಣ್ಯಪಿ - ಹಾಲುಸುರಿಸುವ ಆಲ ಇತ್ಯಾದಿ, ದಾಡಿಮ - ದಾಳಿಂಬೆ, ಮೂಲಮ್ - ಹಿಪ್ಪಲಿಮೂಲ, ಶುಕ್ತಿ - ಕಪ್ಪೆಚಿಪ್ಪು, ಪುನರ್ನವಾ - ಬಿಳಿಕೊಮ್ಮೆ, ಕತಕ - ಚಿಲ್ಲ, ಲೋಡ್ರ - ಲೋಧ್ರ, ಸಿತಾ - ಸಕ್ಕರೆ, ಕುಂಕುಮ - ಕುಂಕುಮಕೇಸರಿ,

**70.** ಧಾತ್ರೀಪೀತಕರೋಹಿಣೀಗದಬಲಾಕಾಸ್ಯಂ ಕರಂಜಂ ಫಲಂ
ಜೀವಂತೀ ಶಫರೀಕ್ಷಣಾ ಲವಣಿಕಾ ಮೇಘಾರವಂ ಗೃಂಜನಮ್ ।
ಅಕ್ಷಾರಣ್ಯಕುಳುತ್ಥವಾಜಿಪೃಥುಕಾಮೂಲಂ ವರಾಟಸ್ತಿಲಾ
ಪುಷ್ಪಂ ತೀಕ್ಷ್ಣಶಿರಃಪಲಾಶವಿಜಯಾ ವಿಶ್ವೌಷಧಂ ಟಂಕಣಮ್ ॥

ಧಾತ್ರೀ - ನೆಲ್ಲಿ, ಪೀತಕ - ನಂದಿವೃಕ್ಷ, ರೋಹಿಣೀ - ಬಿಳಿಕಗ್ಗಲಿ, ಗದ - ಚಂಗಲಕೋಷ್ಠ, ಬಲಾ - ಅರಿಸಿನ, ಕಾಸ್ಯ - ವಾಸಾ, ಕರಂಜಫಲ - ಹೊಂಗೆಹಣ್ಣು, ಜೀವಂತೀ - ಸಿಹಿಹಾಲೆ, ಲವಣಿಕಾ - ಸೈಂಧವಲವಣ, ಗುಂಜನ - ಬೆಳ್ಳುಳ್ಳಿ, ಅಕ್ಷಾರಣ್ಯ - ಕಾಡುತಾರೆ, ಕುಳುತ್ಥ - ಹುರಳಿ, ವಾಜೀ - ಅಶ್ವಗಂಧ, ಪೃಥುಕಾಮೂಲ - ಎಳೆಯ ಹಿಪ್ಪಲಿ, ವರಾಟ - ತಾವರೆಕಾಯಿ, ತಿಲ - ಎಳ್ಳು, ಪುಷ್ಪ - ಹೂವು,

ತೀಕ್ಷ್ಣಶಿರಃ - ಯವಕ್ಷಾರ, ಪಲಾಶ - ಮುತ್ತುಗ, ವಿಜಯಾ - ಮಂಜಿಷ್ಠೆ (ಬಜೆ ಅಥವಾ ಹಳದಿಮಲ್ಲಿಗೆ), ವಿಶ್ವೌಷಧ - ಶುಂಠಿ, ಟಂಕಣ - ಬಿಲಗಾರದ ಹರಳು,

**71.** ನಂದ್ಯಾವರ್ತಕತಾಲವೃಂತಲಿಕುಚವೃಕ್ಷಾಮ್ಲಪುಷ್ಪೋದ್ಭವಂ
ನಾರೀಕ್ಷೀರತಟಾಕಶುಕ್ತಿಸಲಿಲಂ ಬ್ರಹ್ಮದ್ರುದುಗ್ಧಾನ್ಯಪಿ |
ಕ್ಷೌದ್ರಾಜ್ಯಂ ನವನೀತಮಪ್ಯಪಹರಂತ್ಯಕ್ಷ್ಣೋರಶೇಷಾನ್ ಗದಾನ್
ಗಂಡೂಷಾಂಜನತೃಪ್ತಿನಸ್ಯಪುಟಪಾಕಾಶ್ಚ್ಯೋತನಾಲೇಪನೈಃ ||

ನಂದ್ಯಾವರ್ತಕ - ನಂದಿಬಟ್ಟಲು ಹೂವು, ತಾಲವೃಂತ - ತಾಳೆಹಣ್ಣು, ಲಿಕುಚ - ಗಜನಿಂಬೆ, ವೃಕ್ಷಾಮ್ಲಪುಷ್ಪೋದ್ಭವ - ಹುಣಸೆಮರದ ಹೂವಿನ ಚಿಗುರು ಮತ್ತು ರಸ, ನಾರೀಕ್ಷೀರ - ಮೊಲೆಹಾಲು, ತಟಾಕಶುಕ್ತಿಸಲಿಲ - ತಾವರೆಗಳುಳ್ಳ ಕೆರೆಯಲ್ಲಿರುವ ಶಂಖ ಮತ್ತು ನೀರು, ಬ್ರಹ್ಮದ್ರುದುಗ್ಧಾನ್ಯಪಿ - ಅತ್ತಿಮರದ ಹಾಲು, ಕ್ಷೌದ್ರಾಜ್ಯ - ಜೇನುತುಪ್ಪ ಮತ್ತು ಆಕಳತುಪ್ಪ, ನವನೀತ - ಬೆಣ್ಣೆ ಇವು ಅಕ್ಷ್ಣೋರಶೇಷಾಂಗದಾನ್ - ಕಣ್ಣು ಮತ್ತು ಶೇಷ ಅಂಗದ (ಶಿರಸ್ಸಿನ ಬೇರೆ ಅಂಗದ) ವ್ಯಾಧಿಗಳನ್ನು, ಹರಂತಿ - ನಾಶಪಡಿಸುತ್ತವೆ. ಗಂಡೂಷ - ನೀರಿನಿಂದ ಬಾಯಿ ಮುಕ್ಕಳಿಸುವುದು, ನಶ್ಯ - ಮೂಗಿಗೆ ನಶ್ಯ ಮಾಡಿಸುವುದು, ಪುಟಪಾಕ - ಪುಟಪಾಕ, ಶ್ಚ್ಯೋತನ - ಸುರಿಸುವುದು ಹಾಗೂ, ಆಲೇಪನೈಃ - ಲೇಪನ ಇವುಗಳು, ಅಕ್ಷ್ಣೋಃ - ಎರಡು ಕಣ್ಣುಗಳ, ಗದಾನ್ - ರೋಗಗಳನ್ನು, ಅಪಹರಂತಿ - ಹೋಗಲಾಡಿಸುತ್ತವೆ.

ಕರ್ಣರೋಗಕ್ಕೆ -

**72.** ಪತ್ರಾಣಶಿಗ್ರುತುಲಸೀರವಿಸಿಂಧುವಾರ
ಪತ್ರಸ್ನುಹೀರಜನಿಬರ್ಬರಮೂಲಕಾನಾಮ್ |

ಮೂರ್ವೀವರಾಳಲಿಕುಚಾಂಬುವಚಾಶತಾಹ್ವಾಂ

ಸಿಂಧೂತ್ಥಗುಗ್ಗುಲಪಲಾಂಡುಸುಧಾರಸೋನಾಃ ||

ಶಿಗ್ರು - ನುಗ್ಗೆ, ತುಲಸೀ - ತುಲಸೀ, ರವಿ - ಎಕ್ಕ, ಸಿಂಧುವಾರ - ಲಕ್ಕಿಗಿಡ ಇವುಗಳ, ಪತ್ರಾಣಿ - ಎಲೆಗಳು, ಸ್ನುಹೀ - ಮುಂಡಗಳ್ಳಿ, ರಜನಿ - ನೀಲಿಗಿಡ, ಬರ್ಬರ - ನಾರಂಬೇಳೆ, ಮೂಲಕಾನಾಮ್ - ಮೂಲಂಗಿಗಿಡಗಳ, ಪತ್ರಮ್ - ಎಲೆ (ಸೊಪ್ಪುಗಳು), ಮೂರ್ವೀ - ಕೊರಟಿಗೆಬಳ್ಳಿ, ವರಾಳಲಿಕುಚಾಂಬು - ಗಜನಿಂಬೆಯ ರಸ, ವಚಾ - ಬಜೆ, ಶತಾಹ್ವಾ - ಶತಾವರಿ, ಸಿಂಧೂತ್ಥ - ಸೈಂಧವಲವಣ, ಗುಗ್ಗುಲು - ಗುಗ್ಗುಳ, ಪಲಾಂಡು - ಈರುಳ್ಳಿ, ಸುಧಾ - ಅಳಲೆ ಅಥವಾ ನೆಲ್ಲಿಕಾಯಿ, ರಸೋನಾಃ - ಬೆಳ್ಳುಳ್ಳಿ ಇವುಗಳು,

73. ಕಾರ್ಪಾಸಬಾಲಫಲಸರ್ಷಪತೈಲತೈಲ-

ಮಾವರ್ತಿನೀಫಲಿಸುರಾಹ್ವನಿಶಾರ್ದ್ರಕಾನಿ |

ವ್ಯೋಷಾಜಮೂತ್ರನೃಪವೃಕ್ಷಫಲಾತ್ರಿಶೂಲ್ಯಃ

ಕರ್ಣ್ಣಾರ್ತೀಃ ಹಂತ್ಯಪಿ ಚಾಮರತಾಲನಾಲಾಃ ||

ಕಾರ್ಪಾಸಬಾಲಫಲ - ಹತ್ತಿಯ ಎಳೆಕಾಯಿ, ಸರ್ಷಪತೈಲ - ಸಾಸಿವೆ ಎಣ್ಣೆ, ತೈಲಮ್ - ಎಳ್ಳೆಣ್ಣೆ, ಆವರ್ತಿನೀಫಲಿ - ಬಲಮರಿಗಿಡದ ಹಣ್ಣು, ಸುರಾಹ್ವ - ದೇವದಾರು, ನಿಶಾ - ಅರಿಶಿನ, ಆರ್ದ್ರಕಾನಿ - ಹಸಿಶುಂಠಿ, ವ್ಯೋಷ - ತ್ರಿಕಟುಕ, ಅಜಮೂತ್ರ - ಮೇಕೆಯ ಮೂತ್ರ, ನೃಪವೃಕ್ಷಫಲ - ಕಕ್ಕೆಗಿಡದ ಹಣ್ಣು, ಚಾಮರ - ಜಂಬೂಗರಿಕೆ ಹುಲ್ಲಿನ ನಾಳ, ತಾಳನಾಲ - ತಾಳೆಮರದ ದಂಟು ಇವುಗಳು, ತ್ರಿಶೂಲ್ಯಃ - ಮೂರುವಿಧವಾದ, ಕರ್ಣಾರ್ತೀಃ - ಕಿವಿಯ ರೋಗಗಳನ್ನು, ಹಂತಿ - ನಾಶಮಾಡುತ್ತವೆ.

ಮತಾಂತರ ಕರ್ಣರೋಗಕ್ಕೆ -

74. ಪತಂಗಾಸನಲೋಧ್ರಸೈಂಧವಕಣಾಗೋಮೂತ್ರಪಥ್ಯಾತ್ರುಟೀ
ದಾರ್ವೀಗ್ರಂಧಿಕದಾರುತೀಕ್ಷ್ಣಚವಿಕಾ ತೇಜೋವತೀ ವತ್ಸಕಮ್ |
ತಾಳೀಸಾಗ್ನಿನಿಶಾಂತಧೂಮಕಯವಕ್ಷಾರಶ್ಚ ವಿಶ್ವೌಷಧಂ
ಘ್ರೀಬೇರಾಮಯಮಾಕ್ಷಿಕೇನ ಸಹಿತಂ ನಿಘ್ನಂತಿ ಕರ್ಣಾಮಯಾನ್ ||

ಪತ್ತಂಗ - ಪಾದರಸ, ಅಸನ - ಹೊನ್ನೆ, ಲೋಧ್ರ - ಲೋಧ್ರ, ಸೈಂಧವ - ಸೈಂಧವಲವಣ, ಕಣಾ - ಹಿಪ್ಪಲಿ, ಗೋಮೂತ್ರ - ಗೋಮೂತ್ರ, ಪಂಥ್ಯಾ - ಅಳಲೆ, ತ್ರುಟೀ - ಸಣ್ಣ ಏಲಕ್ಕಿ, ದಾರ್ವೀ - ಮರದರಿಸಿನ, ಗ್ರಂಥಿಕ - ಬಿಸಗ್ರಂಥಿ, ದಾರು - ದೇವದಾರು ತೀಕ್ಷ್ಣ - ಯವಕ್ಷಾರ, ಛವಿಕಾ - ಚವ್ಯ, ತೇಜೋವತೀ - ಜ್ಯೋತಿಷ್ಮತಿ, ವತ್ಸಕ - ಗಂಧಕಾಮ್ಲಲವಣ, ತಾಲೀಸ - ತಾಲಿಸಪತ್ರೆ, ಅಗ್ನಿ - ಚಿತ್ರಮೂಲ, ನಿಶಾಂತಧೂಮಕ - ಇಲ್ಲಣ, ಯವಕ್ಷಾರ - ಯವಕ್ಷಾರ, ವಿಶ್ವೌಷಧ - ಶುಂಠಿ, ಮಾಕ್ಷಿಕ - ಜೇನುತುಪ್ಪ ಇವುಗಳು, ಕರ್ಣಾಮಯಾನ್ - ಕಿವಿಯ ರೋಗಗಳನ್ನು, ನಿಘ್ನಂತಿ - ನಾಶಮಾಡುತ್ತವೆ.

ನಾಸರೋಗಕ್ಕೆ -

75. ತಾಳೀಸೋಷಣವಹ್ನಿ ನಾಗರಕಣಾಮಂಡೂಕಪರ್ಣಾನಿಶಾ
ನಿಗುಂಡೀತುಲಸೀಕುಳುತ್ಥಚವಿಕಾಪಾಮಾರ್ಗತಕ್ಕಾರಿಭಿಃ |
ಭೃಂಗಾಂಗಸ್ತ್ಯ ಸುರಾಹ್ವಮೂಲಕಪುರಾಜಾಜೀದ್ವಯಗ್ರಂಥಿಕಂ
ಶ್ರೇಷ್ಠಾವೇಲ್ಲಕರಂಜಬೀಜಲಶುನ್ಯೈರ್ನಶ್ಯಂತಿ ನಾಸಾಮಯಾನ್ ||

ತಾಳೀಸ - ತಾಲಿಸಪತ್ರೆ, ಓಷಣವಹ್ನಿ - ಕಟುರಸದ ಹೊಗೆ, ನಾಗರ - ಕೊಸ್ನಾರಿ ಅಥವಾ ಶುಂಠಿ, ಕಣಾ - ಹಿಪ್ಪಲಿ, ಮಂಡೂಕ - ಹೆಮ್ಮರ, ಪರ್ಣಾ - ಒಂದೆಲಗ ಅಥವಾ ಹೊನಗೊನೆ ಸೊಪ್ಪು, ನಿಶಾ - ಅರಿಸಿನ, ನಿರ್ಗುಂಡೀ - ಲಕ್ಕಿ, ತುಲಸೀ - ತುಲಸೀ, ಕುಳುತ್ಥ - ಹುರಳಿ, ಚವಿಕಾ - ಚವ್ಯ, ಅಪಾಮಾರ್ಗ - ಉತ್ತರಣೆ, ತಕ್ಕಾರಿಭಿಃ - ತಕ್ಕೋಲ, ಭೃಂಗಾಂಗಸ್ಯ - ಗರುಗದ ಸೊಪ್ಪು, ಸುರಾಹ್ವ - ದೇವದಾರು, ಮೂಲಕ - ಮೂಲಂಗಿ, ಪುರ - ಗುಗ್ಗುಳ, ಅಜಾಜೀದ್ವಯ - ಜೀರಿಗೆ, ಕರಿಜೀರಿಗೆ, ಗ್ರಂಥಿಕ - ಮಾಚೀಪತ್ರೆ, ಶ್ರೇಷ್ಠಾ - ನೆಲದಾವರೆ, ವೇಲ್ಲ - ವಾಯುವಿಳಂಗ, ಕರಂಜಬೀಜ - ಹೊಂಗೆಬೀಜ, ಲಶುನೈಃ - ಬೆಳ್ಳುಳ್ಳಿ ಇವುಗಳಿಂದ ನಾಸಾಮಯಾ - ಮೂಗಿಗೆ ಉಂಟಾಗುವ ರೋಗಗಳು, ನಶ್ಯಂತಿ - ನಾಶವಾಗುತ್ತವೆ.

ತುಟಿಯ ರೋಗಕ್ಕೆ -

76. ಸರ್ಜರಸತೈಲತೈಲಂ ತ್ರಿಫಲಾಕ್ಷೌದ್ರಾಕ್ಷಪಾಮಧೂಚ್ಛಿಷ್ಟಮ್ |
ನಿಂಬಾರ್ಝುಟಾಸುರದ್ರುಮನಿರ್ಗುಂಡೀಮಧುಕಮೋಷ್ಠರೋಗಘ್ನಮ್ ||

ಸರ್ಜರಸ - ಮತ್ತಿಮರದ ಹಾಲು ಮತ್ತು, ತೈಲ - ಎಣ್ಣೆ, ತೈಲ - ಎಳ್ಳೆಣ್ಣೆ, ತ್ರಿಫಲ - ಅಳಲೆಕಾಯಿ, ತಾರೆಕಾಯಿ, ನೆಲ್ಲಿಕಾಯಿ, ಕ್ಷೌದ್ರ - ಸಂಪಿಗೆ, ಕ್ಷಪಾ - ಅರಿಸಿನ, ಮಧೂಚ್ಛಿಷ್ಟ - ಜೇನುತುಪ್ಪ, ನಿಂಬ - ಬೇವು, ಝುಟಾ - ಜಟಾಮಾಂಸಿ, ಸುರದ್ರುಮ - ದೇವದಾರು, ನಿರ್ಗುಂಡಿ - ಲಕ್ಕಿ, ಮಧುಕ - ಯಷ್ಟಿಮಧುಕಾ ಇವುಗಳು, ಓಷ್ಠರೋಗಘ್ನವ್ - ತುಟಿಯ ರೋಗಗಳನ್ನು ನಾಶ ಮಾಡುವಂತಹವುಗಳು.

ಗಂಡಮಾಲಾರೋಗಕ್ಕೆ -

77. ಗಂಡಾಲಜ್ಯಾಮಪಕ್ವಾಂ ಶೋಭವಟುಪಚರ್ಯಂತಾಂಚಾವಿದುಗ್ಧೈಶ್ಚ |
ಉಪನಾಹೈಃ ವಿಪಾಚ್ಯಾಶ್ಚಣಕ್ಯೈಃ ಪ್ರತ್ಸಾಧಯೆದ್‌ವ್ರಣನಾತ್ ||

ಗಂಡಾಲಜ್ಯಾಮ್ - ಗಂಡಮಾಲ, ಅಲರ್ಜಿಗಳಿಗೆ, ಅಪಕ್ವಾಮ್ - ಅರ್ಧ ಬೆಂದಿರುವ ಅನ್ನಾದಿಗಳನ್ನು, ಶೋಭವತ್ - ಅರಿಸಿನ ಅಥವಾ ಗೋರೋಚನದಂತೆ, ಚ - ಮತ್ತು, ಅವಿದುಗ್ಧೈಃ - ಆಡಿನ ಹಾಲುಗಳಿಂದ, ಉಪಚರ್ಯಂತಾಮ್ - ಔಷಧೋಪಚಾರ ಮಾಡಬೇಕು. ವಿಪಾಚ್ಯಾಶ್ಚಣಕ್ಯೈಃ - ಕಾಯಿಸಿದ ಕಡಲೆಹಿಟ್ಟುಗಳಿಂದ, ಉಪನಾಹೈಃ - ಪೋಟ್ಲಿಸ್ ಕಟ್ಟುವುದನ್ನು, ವ್ರಣನಾತ್ - ವ್ರಣದಂತೆ, ಪ್ರಸಾಧಯೇತ್ - ಚಿಕಿತ್ಸೆ ಮಾಡಬೇಕು.

ದಂತರೋಗಕ್ಕೆ -

78. ರಾಸ್ನಾಪುಂಖಿತಿಲಾರಿಮೇದಕಕುಭತ್ವಗ್ಭಾನುಕೇರೀಪಯೋ
ವರ್ಷಾಭೂತಾಲಪೋಟಹಿಂಗುವಕುಳಂ ಬೀಜಂ ಹರಿನ್ಮಂಜರೀ |
ಸಿಂಧೂತ್ಥಾತಸೀವಿಶ್ವಪತ್ರಖದಿರಂ ತೈಲಂ ಚ ಕರ್ಪೂರಜಂ
ತೈಲಂ ದೀಪ್ಯಕಮುದ್ಧರಂತಿ ರದಜಾನ್ ತನ್ಮೂಲಜಾಂಶ್ಚಾಮಯಾನ್ ||

ರಾಸ್ನಾ - ರಾಸ್ನೆ, ಪುಂಖಿ - ಹರಿದ್ರಾ, ತಿಲ - ಎಳ್ಳು, ಅರಿಮೇದ - ದುರ್ವಾಸನೆಯ ಕಗ್ಗಲಿ, ಕಕುಭ - ಕೆಂಪು ಮತ್ತಿಮರದ, ತ್ವಕ್ - ಚಕ್ಕೆ, ಭಾನು - ಎಕ್ಕ, ಕೇರೀಪಯಃ - ಎಳನೀರು, ವರ್ಷಾಭೂ - ಬಿಳಿಕೊಮ್ಮೆ, ತಾಲ - ತಾಳೆ ಇವುಗಳನ್ನು, ಪೋಟ - ಬೆರೆಸಿ ಮಾಡಿದ ಕಷಾಯ, ಹಿಂಗು - ಹಿಂಗು, ವಕುಳಬೀಜ

- ವಕುಳವೃಕ್ಷದ ಬೀಜ, ಹರಿನ್‌ಮಂಜರೀ - ತುಪ್ಪಕೀರೆ (ಕುಪ್ಪಿಹೀರೆ), ಸಿಂಧೂತ್ಥ - ಸೈಂಧವಲವಣ, ಅತಸೀ - ಅಗಸೆನಾರು, ವಿಶ್ವ - ಶುಂಠಿ, ಖದಿರ - ಕಗ್ಗಲಿಮರದ, ಪತ್ರ - ಎಲೆ, ಚ - ಮತ್ತು, ತೈಲ - ಎಣ್ಣೆ, ದೀಪ್ಯಕ - ಬಿಸಿಯಾದ, ಕರ್ಪೂರರಜಂ ತೈಲಮ್ - ಕರ್ಪೂರತೈಲ ಇವುಗಳು, ರದಜಾನ್ - ಹಲ್ಲುಗಳಲ್ಲಿ ಉಂಟಾದ, ಆಮಯಾನ್ - ರೋಗಗಳನ್ನು, ತನ್ಮೂಲಜಾಂಶ್ಚ - ಹಲ್ಲಿನಿಂದ ಉಂಟಾಗುವ ಇತರ ರೋಗಗಳನ್ನು, ಉದ್ಧರಂತಿ - ಹೋಗಲಾಡಿಸುತ್ತದೆ.

ತಾಲು (ಅಂಗುಳ) ರೋಗಕ್ಕೆ -

**79.** ದಾರ್ವೀವ್ಯೋಷತಿಲಾ ಚ ನಿಂಬತುಲಸೀಸಿಂಧೂತ್ಥಪಥ್ಯಾನಿಶಾ
ನಿರ್ಗುಂಡೀಖದಿರಾರಿಮೇದಯುಗಳೀ ಕ್ಷೀರದ್ರುಮತ್ವಗ್ಗದಾ |
ವಾಶಾ ಪಿಪ್ಪಲಿಕಾಮಮಾಕ್ಷಿಕಘೃತಕ್ಷೀರೋಪಕುಂಚೀಬಲಾ
ವಿಷ್ಣುಕ್ರಾಂತಪಟೋಲಿಕಾಶ್ಚ ರಸನಾತಾಲ್ವಾಮಯಚ್ಛದನಾಃ ||

ದಾರ್ವೀ - ಮರದರಿಶಿನ, ವ್ಯೋಷ - ತ್ರಿಕಟು (ಶುಂಠಿ, ಮೆಣಸು, ಹಿಪ್ಪಲಿ), ಚ - ಮತ್ತು, ತಿಲಾ - ಎಳ್ಳೆಣ್ಣೆ, ನಿಂಬ - ಬೇವು, ತುಲಸೀ - ತುಲಸಿ, ಸಿಂಧೂತ್ಥ - ಸೈಂಧವಲವಣ, ಪಥ್ಯಾ - ಅಳಲೆ, ನಿಶಾ - ಅರಿಸಿನ, ನಿರ್ಗುಂಡೀ - ಲಕ್ಕಿ, ಖದಿರ - ಕಗ್ಗಲಿ, ಅರಿಮೇದಯುಗಳೀ - ದುರ್ವಾಸನೆಯ ಕಗ್ಗಲಿ ಮತ್ತು ಸಾಮಾನ್ಯ ಕಗ್ಗಲಿ, ಕ್ಷೀರದ್ರುಮತ್ವಕ್ - ಹಾಲು ಸುರಿಸುವ ಆಲ, ಅರಳಿ, ಬೇವು, ಮತ್ತಿ ಮುಂತಾದ ಮರಗಳ ತೊಗಟೆ, ವಾಶಾ - ಆಡುಸೋಗೆ, ಆಮಪಿಪ್ಪಲಿಕ - ಎಳೆಯ ಹಿಪ್ಪಲಿ, ಮಾಕ್ಷಿಕಘೃತ - ಜೇನುತುಪ್ಪ ಮತ್ತು ಆಕಳ ತುಪ್ಪ, ಕ್ಷೀರ - ಹಾಲು, ಉಪಕುಂಚೀ - ಕರಿಜೀರಿಗೆ ಅಥವಾ ಯಾಲಕ್ಕಿ, ಬಲಾ - ಕಲ್ಲಂಗಡಲೆ, ವಿಷ್ಣುಕ್ರಾಂತ -

ವಿಷ್ಣುಕ್ರಾಂತಿ, ಪಟೋಲಿಕಾ - ಕಹಿಪಡವಲ ಇವುಗಳು, ರಸನಾತಾಲ್ವಾಮಯ-ಚ್ಛದನಾ - ನಾಲಿಗೆ ಮತ್ತು ತಾಲುರೋಗಗಳನ್ನು ಮುಚ್ಚುವಂತಹವು ಅಂದರೆ ರೋಗಗಳನ್ನು ಗುಣಪಡಿಸುತ್ತವೆ.

ಮುಖರೋಗಕ್ಕೆ -

**80.** ಜಾತೀಪತ್ರವರಾಟಿಮೇದಮದುಕಂ ಕ್ಷೀರದ್ರುನಿಂಬಾಮಯಾ
ದಾರ್ವೀವ್ಯೋಷವರಾಟಜೀರಕಚತುರ್ಜಾತಾಬ್ಧತಕ್ಕೋಲಕಾಃ |
ಜಂಬೂಖಾದಿರಸಾಲಪಾರ್ಥತುಲಸೀ ಗೋಮೂತ್ರಜಾತೀಫಲಂ
ಕ್ಷೌದ್ರಕ್ಷೀರಶಶಾಂಕರಾಜತರವಾಸರ್ವಾಸ್ಯರೋಗಾಪಹಾಃ ||

ಜಾತೀಪತ್ರ - ಜಾಯಿಕಾಯಿಪತ್ರೆ, ವರಾ - ಅರಿಸಿನ, ಅರಿಮೇದ - ಕಗ್ಗಲಿ, ಮಧುಕಮ್ - ಅತಿಮಧುರಾ, ಕ್ಷೀರದ್ರು - ಆಲ, ನಿಂಬ - ಬೇವು, ದಾರ್ವೀ - ಮರದರಿಸಿನ, ವ್ಯೋಷ - ತ್ರಿಕಟುಕಾ, ವರಾಟ - ತಾವರೆಕಾಯಿ, ಜೀರಕ - ಜೀರಿಗೆ, ಚತುರ್ಜಾತ - ಲವಂಗ, ಯಾಲಕ್ಕಿ, ಜಾಪತ್ರೆ ಮತ್ತು ನಾಗಕೇಸರ, ಅಬ್ಧ - ಉಪ್ಪು, ತಕ್ಕೋಲಕಾಃ - ತಕ್ಕೋಲವೃಕ್ಷದ ಪರಿಮಳದ್ರವ್ಯ, ಜಂಬೂ - ನೇರಳೆ, ಖಾದಿರ - ಕಗ್ಗಲಿಮರದ ಗೋಂದು, ಸಾಲ - ಸರ್ಜರಸ, ಪಾರ್ಥ - ಕೆಂಪುಮತ್ತಿ, ತುಲಸೀ - ತುಳಸೀ, ಗೋಮೂತ್ರ - ಗಂಜಲ, ಜಾತೀಫಲಮ್ - ಜಾಯಿಕಾಯಿ, ಕ್ಷೌದ್ರ - ಜೇನುತುಪ್ಪ, ಕ್ಷೀರ - ಹಾಲು, ಶಶಾಂಕರಾಜತರವಾ - ಚಂದ್ರನಂತೆ ಬೆಳ್ಳಗಿರುವ ಅಮೃತಬಳ್ಳಿ, ಸರ್ವಾ - ಇವೆಲ್ಲವೂ, ಆಸ್ಯರೋಗಾಪಹಾಃ - ಮುಖರೋಗಗಳನ್ನು ಪರಿಹರಿಸುತ್ತವೆ.

ಶಿರೋರೋಗಕ್ಕೆ -

81. ಯಷ್ಟೀಸಿತಾತಗರಕುಂಕುಮಕುಷ್ಠಗೋಪೀ
ಸೇವ್ಯತ್ರಿಜಾತಘನಚಂದನಕೇಸರಾಣಿ |
ಸಿಂಧೂತ್ಥರಾಮಟವರಾಮೃಗನಾಭಿಕನ್ಯಾ
ಮಂಜಿಷ್ಠರಾತ್ರಿಕಟುಭೃಂಗಬಲಾಶತಾಹ್ವಾಃ ||

ಯಷ್ಟೀ - ಅತಿಮಧುರ, ಸಿತಾ - ಸಕ್ಕರೆ, ತಗರ - ನಂದಿಬಟ್ಟಲು, ಕುಂಕುಮ - ಕುಂಕುಮಕೇಸರಿ, ಕುಷ್ಠ - ಚಂಗಲಕೋಷ್ಠ, ಗೋಪೀ - ಸೊಗದೆ, ಸೇವ್ಯ - ಲಾವಂಚ, ತ್ರಿಜಾತ - ಜಾಪತ್ರೆ, ಯಾಲಕ್ಕಿ, ಲವಂಗಪಟ್ಟೆ, ಘನ - ಕೊನ್ನಾರಿ, ಚಂದನ - ಶ್ರೀಗಂಧ, ಕೇಸರಾಣಿ - ಕಮಲ, ನಾಗಸಂಪಿಗೆ ಮೊದಲಾದ ಹೂಗಳ ಕುಸುರು, ಸಿಂಧೂತ್ಥ - ಸೈಂಧವಲವಣ, ರಾಮಠ - ಹಿಂಗು, ವರಾ - ತ್ರಿಫಲಾ, ಮೃಗನಾಭಿಕನ್ಯ - ಕಸ್ತೂರಿ, ಮಂಜಿಷ್ಠ - ಮಂಜಿಷ್ಠೆ, ರಾತ್ರಿ - ಅರಿಸಿನ, ಕಟು - ಕಟುಕರೋಹಿಣಿ, ಭೃಂಗ - ಗರಗದ ಸೊಪ್ಪು, ಬಲಾ - ಕಲ್ಲಂಗಡಲೆ, ಶತಾಹ್ವಾಃ - ಶತಾವರಿ,

82. ವೇಲ್ಲಾಮೃತಾಜಲರುಹಾಗರುದೇವದಾರು
ಕರ್ಪೂರರೋಚಕನಿಶದ್ವಿತಯೋತ್ಪಲಾನಿ |
ಕಲ್ಹಾರಜಾತೀಫಲತೈಲಪಯೋಧರಾಶ್ಚ
ಮೂರ್ಧ್ನಾಮಯಾನ್ ಪ್ರಶಮಯಂತಿ ಕಪೋಲಜಾಂಶ್ಚ ||

ವೇಲ್ಲ - ವಾಯುವಿಳಂಗ, ಅಮೃತ - ಅಮೃತಬಳ್ಳಿ, ಜಲರುಹ - ತಾವರೆ, ಅಗರು - ಅಗರುಚಂದನ, ದೇವದಾರು - ದೇವದಾರು, ಕರ್ಪೂರ - ಕರ್ಪೂರ, ರೋಚಕ - ಬಾಳೆಹಣ್ಣು, ನಿಶಾದ್ವಿತಯ - ಅರಿಸಿನ, ಮರದರಿಸಿನ, ಉತ್ಪಲಾನಿ -

ಕನ್ನೈದಿಲೆ, ಕಲ್ಹಾರ - ಎಳೆಗೆಂಪುಳ್ಳ ನೈದಿಲೆ, ಜಾತೀಫಲ - ಜಾಯಿಕಾಯಿ, ತೈಲ - ಎಳ್ಳೆಣ್ಣೆ, ಪಯೋಧರಾಃ - ಕೊನ್ನಾರಿಗೆಡ್ಡೆ ಇವುಗಳು, ಮೂರ್ಧ್ನಾಮಯಾನ್ - ಶಿರೋರೋಗಗಳನ್ನು, ಚ - ಮತ್ತು, ಕಪಾಲಜಾನ್ - ಕಪಾಲರೋಗಗಳನ್ನು (ಕೆನ್ನೆ, ದವಡೆ ರೋಗಗಳನ್ನು), ಪ್ರಶಮಯಂತಿ - ಶಮನಗೊಳಿಸುತ್ತದೆ.

ಗಾಯಕ್ಕೆ -

83. ಧಾನ್ಯಾಮ್ಲೋದಕಕನ್ಯಕಾತಿಲಘೃತಕ್ಷೀರದ್ರುಯಷ್ಟೀವರಾ
ದೂರ್ವಾಗುಗ್ಗುಲುವಾಸಕೇಶ್ವರಲತಾಗೋಪಾಂಗನಾಮಾಕ್ಷಿಕಮ್ಃ |
ಮಂಜಿಷ್ಠಾರಜನೀಕರಂಜನವಮಾಲ್ಯಾರಾಮಸೀತಾಮ್ಲಿಕಾ
ಜಾತೀಪಲ್ಲವಭೃಂಗತೀಕ್ಷ್ಣಕಟುಕದಾರ್ವೀಮಧೂಚ್ಛಿಷ್ಟಕಮ್ ||

ಧಾನ್ಯಾಮ್ಲೋದಕ - ಗಂಜಿ, ಅಂಬಲಿಯ ನೀರು, ಕನ್ಯಕಾತಿಲ - ಎಳ್ಳಿನ ಚಿಗುರು, ಘೃತ - ತುಪ್ಪ, ಕ್ಷೀರದ್ರು - ಹಾಲು ಸುರಿಸುವ ಮರಗಳ ಹಾಲು, ಯಷ್ಟೀ - ಅತಿಮಧುರ, ವರಾ - ಅರಿಸಿನ, ದೂರ್ವಾ - ಗರಿಕೆಹುಲ್ಲು, ಗುಗ್ಗುಲು - ಗುಗ್ಗುಳ, ವಾಸಕ - ಆಡುಸೋಗೆ, ಈಶ್ವರೀಲತಾ - ಈಶ್ವರಿ ಹಂಬು, ಗೋಪಾಂಗನಾ - ಸೊಗದೆ, ಮಾಕ್ಷಿಕ - ಜೇನುತುಪ್ಪ, ಮಂಜಿಷ್ಠಾ - ಮಂಜಿಷ್ಠೆ, ರಜನೀ - ನೀಲಿಗಿಡ ಅಥವಾ ಕೆಂಪು ಅಗರು, ಕರಂಜ - ಹೊಂಗೆ, ನವಮಾಲ್ಯ - ವೀರಜಾಜೀ, ಆರಾಮಸೀತ - ತೋಟದಲ್ಲಿ ಬೆಳೆದ ಪೈರು, ಆಮ್ಲಿಕಾ - ಹುಣಸೆ, ಜಾತೀಪಲ್ಲವ - ಜಾಜಿಯ ಚಿಗುರು, ಭೃಂಗ - ಗರುಗದ ಸೊಪ್ಪು, ತೀಕ್ಷ್ಣ - ಯವಕ್ಷಾರ, ಕಟುಕ - ಕಟುಕರೋಹಿಣಿ, ದಾರ್ವೀ - ಮರದರಿಸಿನ, ಮಧೂಚ್ಛಿಷ್ಟಕಮ್ - ಜೇನುಮೇಣ,

**84.** ಯುಕ್ತಂ ತಂಡುಲಖಂಡನಂ ಪವನಜಿತ್ತೈಲೇನಯುಕ್ತಂ ಗುಡಂ
ಚೂರ್ಣಂ ಚಾಪಿ ಪುರಾಣಶ್ಶೈವಲದಳಂ ಸುಶ್ಲಕ್ಷ್ಣಪಿಷ್ಟಂ ಜಲೈಃ |
ಪತ್ರಂ ಪಪ್ಪಣಬೋಧಿನಿಂಬಸುವಹಾಕಾರ್ಪಾಸಕೀಕೇತಕೀ
ಚಿಂಚಾಕೋಲವಿದಾರಿಜಂ ವ್ರಣಹರಂ ಲೇಪೋಪನಾಹಾದಿಭಿಃ ||

ತಂಡುಲಖಂಡನವ್ - ಅಕ್ಕಿಹಿಟ್ಟಿನೊಡನೆ, ಗುಡವ್ - ಬೆಲ್ಲವನ್ನು, ಪವನಪಿತ್ತೈಲೇನ ಯುಕ್ತಮ್ - ವಾತಹರ ತೈಲದೊಡನೆ ಸೇರಿಸಿ, ಚ - ಮತ್ತು, ಪುರಾಣಚೂರ್ಣಮಪಿ - ಹಿಂದೆ ಹೇಳಿದ (ಮೇಲೆ ತಿಳಿಸಿರುವ) ಎಲ್ಲಾ ಚೂರ್ಣ (ಪುಡಿ)ಗಳನ್ನು, ಶೈವಲದಳಮ್ - ಪಾಚಿಯ ಎಲೆಯನ್ನು, ಸುಶ್ಲಕ್ಷ್ಣಪಿಷ್ಟಮ್ - ಚೆನ್ನಾಗಿ ಕಲೆಸಿರುವ ಅಕ್ಕಿಹಿಟ್ಟನ್ನು, ಜಲೈಃ - ನೀರಿನಲ್ಲಿ, ಯುಕ್ತಮ್ - ಸೇರಿಸಿ, ಬೋಧಿ - ಅರಳಿ, ನಿಂಬ - ಬೇವು, ಸುವಹಾ - ಹಂಸಪದೀ, ಕಾರ್ಪಾಸಕೀ - ಹತ್ತಿ, ಕೇತಕೀ - ತಾಳೆಮರಗಳ, ಪುಷ್ಪಮ್ - ಹೂವು ಮತ್ತು, ಪತ್ರಮ್ - ಎಲೆಗಳು, ಚಿಂಚ - ಹುಣಿಸೆ, ಕೋಲ - ಹಿಪ್ಪಲಿ, ವಿದಾರಿ - ನೆಲಗುಂಬಳ ಅಥವಾ ಮೂರೆಲೆ ಹೊನ್ನೆ ಇವುಗಳ, ಲೇಪ - ಲೇಪನದಿಂದ, ಉಪನಾಹಾ - ಪೋಟ್ಲಿಸ್ ಕಟ್ಟುವುದು ಇತ್ಯಾದಿಗಳಿಂದ, ವ್ರಣಹರಮ್ - ಗಾಯವು ನಾಶವಾಗುತ್ತದೆ.

ಆಗ ತಾನೆ ಆದ ಗಾಯಕ್ಕೆ -

**85.** ಸದ್ಯೋ ವ್ರಣೇ ಯಷ್ಟಿಮಧೂಕದುಗ್ಧಕ್ಷೌದ್ರಾಜ್ಯಲಾಕ್ಷಾಂಜನಕಾಕತಿಕ್ತಾಃ |
ಪಥ್ಯಾಪಲಾಂಡುಪ್ರಿಯಭೂರುಹತ್ವಙ್ಮಯೂರಿಕಾ ಸರ್ಜರಸಾ ಹಿತಾಸ್ಸ್ಯುಃ ||

ಯಷ್ಟಿ - ಅತಿಮಧುರ, ಮಧೂಕ - ಹಿಪ್ಪೆಹೂವು, .ದುಗ್ಧ - ಹಾಲು, ಕ್ಷೌದ್ರ - ಜೇನು, ಆಜ್ಯ - ತುಪ್ಪ, ಲಾಕ್ಷಾಂಜನ - ಅಗರು ಅಂಜನ, ಕಾಕತಿಕ್ತಾಃ - ಕಾಕ

ಕಟುಕರೋಹಿಣಿ, ಪತ್ಥ್ಯಾ - ಅಳಲೆ, ಪಲಾಂಡು - ಈರುಳ್ಳಿ, ಪ್ರಿಯಭೂರುಹತ್ವಕ್ - ಪ್ರಿಯಂಗುಮರದ ತೊಗಟೆ, ಮಯೂರಿಕಾ - ಉತ್ತರಣೆ, ಸರ್ಜರಸ - ಸಾಲವೃಕ್ಷದ ಹಾಲು ಇವುಗಳು, ಸದ್ಯೋವ್ರಣೇ - ಆಗ ತಾನೆ ಆದ ಗಾಯದಲ್ಲಿ, ಹಿತಾಸ್ಸ್ಯುಃ - ಹಿತವಾಗುತ್ತವೆ.

ಸುಟ್ಟಗಾಯಕ್ಕೆ -

**86.** ಸಿದ್ಧೋದಕಜಪಾಜ್ಯಯಷ್ಟಿದೂರ್ವಾಯಕ್ಷಕದುಗ್ಧಿಕಾಕೌಳ್ಯಃ |
ಕೇಶಹಿಮಾಪಾಮಾರ್ಗ್ಯಕಾಸಹದೇವ್ಯಶ್ಚಾಗ್ನಿಜಂ ವ್ರಣಂ ಘ್ನಂತಿ ||

ಜಪಾ - ದಾಸವಾಳ, ಆಜ್ಯ - ತುಪ್ಪ, ಯಷ್ಟಿ - ಅತಿಮಧುರ, ದೂರ್ವಾ - ಗರಿಕೆ, ಯಕ್ಷಕ - ಆಲದ ಹಾಲು, ದುಗ್ಧಿಕಾ - ಹಾಲುತೊಟ್ಟಿನ ಗಿಡ, ಕೌಳ್ಯಃ - ಮೂಳೆ, ಕೇಶ - ಲಾವಂಚ, ಹಿಮ - ಕರ್ಪೂರ, ಅಪಾಮಾರ್ಗ್ಯಕಾ - ಉತ್ತರಣೆ, ಸಹದೇವೀ - ಈಶ್ವರೀಹಂಬು ಇವುಗಳಿಂದ, ಸಿದ್ಧೋದಕ - ತಯಾರಿಸಿದ ಜಲವು, ಅಗ್ನಿಜಂ ವ್ರಣಮ್ - ಸುಟ್ಟಗಾಯವನ್ನು ಹೋಗಲಾಡಿಸುತ್ತವೆ.

ಕೀಲುಗಳ ಮುರಿತಕ್ಕೆ -

**87.** ಸಿದ್ಧಾರ್ಥಾಘೃತಪಟ್ಟವಂಶಬಹುಪಾದಶ್ವತ್ಥಪಾರ್ಥತ್ವಚಾ
ಚಿಂಚಾಸ್ಥಿತ್ವಗುದುಂಬರೋದ್ಭವಪಯೋದ್ರಾಕ್ಷಾಂಡಧಾತ್ರೀಶಿವಾಃ |
ತೈಲಂ ಭೃಷ್ಟಪಟೋತ್ಕಟಂ ಸಮರಿಚಂ ಸರ್ಜ ಚ ಮೃತ್ಕರ್ಪರಂ
ಪಾನಂ ದುಗ್ಧಯುತಸ್ಯ ಬೋಳಜತುನೋ ಸಂಸಂಧಿಭಂಗೇ ಹಿತಮ್ ||

ಸಿದ್ಧಾರ್ಥಾ - ಬಿಳಿಸಾಸಿವೆ, ಘೃತ - ತುಪ್ಪ, ಪಟ್ಟವಂಶ - ಗಾಯಕ್ಕೆ ಕಟ್ಟುವ ಬಿದಿರಿನ ಪಟ್ಟಿ, ಬಹುಪಾದ - ಆಲ, ಅಶ್ವತ್ಥ - ಅರಳಿ, ಪಾರ್ಥ - ಕೆಂಪುಮತ್ತಿ,

ತ್ವಚ - ಈ ಮರಗಳ ತೊಗಟೆ, ಚಿಂಚಾಸ್ಥಿತ್ವಕ್ - ಹುಣಿಸೆಮರದ ತೊಗಟೆ, ಉದುಂಬರೋದ್ಭವ - ಅತ್ತಿಮರದ ಬೀಜ, ಪಯಃ - ಹಾಲು, ದ್ರಾಕ್ಷಾಂಡ - ದ್ರಾಕ್ಷಿಬೀಜ, ಧಾತ್ರೀ - ನೆಲ್ಲಿ, ಶಿವಾಃ - ಅಳಲೆ, ತೈಲಮ್ - ಎಳ್ಳೆಣ್ಣೆ, ಭೃಷ್ಟಪಟ - ಹುರಿದ ಉಪ್ಪು, ಸಮರಿಚಮ್ - ಮೆಣಸಿನೊಡನೆ, ಉತ್ಕಟಮ್ - ಲವಂಗಪತ್ರೆ, ಚ - ಮತ್ತು, ಸರ್ಜಮ್ - ಸಾಲವೃಕ್ಷದ ಹಾಲು, ಮೃತ್ಕರ್ಪರ - ಮಡಿಕೆಯ ಚೂರು, ದುಗ್ಧಯುತಸ್ಯ - ಹಾಲಿನ ಜೊತೆ, ಬೋಳ - ಬಾಣಂತಿಬೋಳದ, ಪಾನಮ್ - ಪಾನ, ಜತುನಃ - ಅರಿಸಿನ ಲೇಪನ, ಸಸಂಧಿಭಂಗೇ - ಮೂಳೆ, ಕೀಲುಗಳ ಮುರಿತದಲ್ಲಿ, ಹಿತಮ್ - ಹಿತವಾದುದು.

ಭಗಂದರ ರೋಗಕ್ಕೆ -

**88.** ವರಾಬಿಡಾಲಾಸ್ಥಿಕಣಾಕಣಿಶ್ಚ
ನ್ಯಗ್ರೋಧಪಕ್ಷಚ್ಛದನಂ ತ್ವಗೇಲಾಃ |
ಭುಜಂಗವೃಶ್ಚೀವ ವಿಳಂಗಸಾರಾಃ
ಕ್ಷಾರಾಗ್ನಿಕರ್ಮಾಣಿ ಭಗಂದರೇ ಸ್ಯುಃ ||

ವರಾ - ಅಳಲೆಕಾಯಿ, ಬಿಡಾಲಾಸ್ಥಿ - ಬೆಕ್ಕಿನ ಮೂಳೆ, ಕಣಾ - ಹಿಪ್ಪಲಿ, ಕಣಿ - ಕಲಸಿದ ಹಿಟ್ಟು, ನ್ಯಗ್ರೋಧಪಕ್ಷಚ್ಛದನಮ್ - ಆಲದ ಹಣ್ಣೆಲೆ (ಪಕ್ಷಿಚ್ಛದನ - ಹಕ್ಕಿಯಗರಿ), ತ್ವಗೇಲಾ - ಯಾಲಕ್ಕಿ ಸಿಪ್ಪೆ, ಭುಜಂಗ - ನಾಗಕೇಸರ, ವೃಶ್ಚೀವ - ವೃಶ್ಚಿಕಾಲಿ, ವಿಳಂಗಸಾರಾಃ - ವಾಯುವಿಳಂಗದ ತಿರುಳು, ಕ್ಷಾರ - ಕ್ಷಾರ, ಅಗ್ನಿಕರ್ಮಾಣಿ - ಅಗ್ನಿಕರ್ಮ ಮಾಡುವುದು, ಭಗಂದರೇ - ಭಗಂದರ ರೋಗದಲ್ಲಿ, ಸ್ಯುಃ - ಗುಣಕಾರಿಗಳಾಗುತ್ತವೆ.

